

# ವಿವೇಕಪ್ರಭ

ಮೇ-2017
ಸಂಪುಟ 18 ಸಂಚಿಕೆ 05



## ವಿಶೇಷ ಲೇಖನ



## ಧಾರಾವಾಹಿ







ವ್ಯವಸ್ಥಾಪಕ ಸಂಪಾದಕರು
*ಸ್ವಾಮಿ ಆತ್ಮಜ್ಞಾನಂದ*
ಸಂಪಾದಕರು
*ಸ್ವಾಮಿ ಜ್ಞಾನಯೋಗಾನಂದ*
ನೆರವು:
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*
ಅಕ್ಷರ ಜೋಡಣೆ
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*
ಮುದ್ರಣ
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

ಮುಖಪುಟ:
ಶ್ರೀರಾಮಾನುಜಾಚಾರ್ಯರು

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505

ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

## ಪ್ರಾರ್ಥನೆ

# ಶ್ರೀ ವೈಕುಂಠಗದ್ಯಮ್

**ಕದಾಽಹಂ ಭಗವಂತಂ, ನಾರಾಯಣಂ, ಮಮ ಕುಲ-ನಾಥಂ, ಮಮ ಕುಲದೈವತಂ, ಮಮ ಕುಲಧನಂ, ಮಮ ಭೋಗ್ಯಂ, ಮಮ ಮಾತರಂ, ಮಮ ಪಿತರಂ, ಮಮ ಸರ್ವಂ, ಸಾಕ್ಷಾತ್ಕರವಾಣಿ ಚಕ್ಷುಷಾ ?**



ಭಗವಂತನನ್ನು, ನಾರಾಯಣನನ್ನು, ನನ್ನ ಕುಲನಾಥನನ್ನು, ನನ್ನ ಕುಲದೇವತೆಯನ್ನು, ನನ್ನ ಕುಲಧನವನ್ನು, ನನ್ನ ಭೋಗ್ಯ ವಸ್ತುವನ್ನು, ನನ್ನ ತಾಯಿಯನ್ನು, ನನ್ನ ತಂದೆಯನ್ನು, ನನ್ನ ಸರ್ವಸ್ವವನ್ನು ಯಾವಾಗ ತಾನೇ ನನ್ನ ಕಣ್ಣುಗಳಿಂದ ಪ್ರತ್ಯಕ್ಷವಾಗಿ ನೋಡಬಲ್ಲೆನು ?

**ಕದಾಽಹಂ ಭಗವತ್ಪಾದಾಂಬುಜದ್ವಯಂ ಸಂಗ್ರಹಿ-ಷ್ಯಾಮಿ? ಕದಾಽಹಂ ಭಗವತ್-ಪಾದಾಂಬುಜ-ದ್ವಯ ಪರಿಚರ್ಯಾಶಯಾ ನಿರಸ್ತ-ಸಮಸ್ತೇತರ-ಭೋಗಾಶಃ, ಅಪಗತ-ಸಮಸ್ತ-ಸಾಂಸಾರಿಕ-ಸ್ವಭಾವಃ ತತ್ಪಾದಾಂಬುಜ-ದ್ವಯಂ ಪ್ರವೇಕ್ಷ್ಯಾಮಿ ?**

ಭಗವಂತನ ಅಡಿದಾವರೆಗಳನ್ನು ಯಾವಾಗ ತಾನೇ ಶಿರಸಾ ಧರಿಸಬಲ್ಲೆನು? ಭಗವಂತನ ಅಡಿದಾವರೆಗಳ ಸೇವೆ ಮಾಡ ಬೇಕೆಂಬ ಆಶೆಯಿಂದ ಇತರ ಭೋಗಾಶೆಗಳನ್ನೆಲ್ಲ ತ್ಯಜಿಸಿ, ಸಮಸ್ತ ಸಾಂಸಾರಿಕ - ಸ್ವಭಾವಗಳನ್ನು ಬಿಟ್ಟು, ಅವನ ಪಾದಾಂಬುಜವನ್ನು ಎಂದು ತಾನೇ ಪ್ರವೇಶಿಸಬಲ್ಲೆನು ?

**ಕದಾಽಹಂ ಭಗವತ್ಪಾದಾಂಬುಜದ್ವಯಪರಿಚರ್ಯಾ-ಕರಣಯೋಗ್ಯಃ, ತದೇಕಭೋಗಃ, ತತ್ಪಾದೌ ಪರಿಚರಿಷ್ಯಾಮಿ? ಕದಾ ಮಾಂ ಭಗವಾನ್ ಸ್ವಕೀಯಯಾ ಅತಿಶೀತಲಯಾ ದೃಶಾ ಅವಲೋಕ್ಯ, ಸ್ನಿಗ್ಧ-ಗಂಭೀರ-ಮಧುರಯಾ ಗಿರಾ ಪರಿಚರ್ಯಾಯಾಮ್ ಆಜ್ಞಾಪಯಿಷ್ಯತಿ ?**

ಭಗವಂತನ ಅಡಿದಾವರೆಗಳ ಸೇವೆಮಾಡಲು ಯೋಗ್ಯ ನಾಗಿ, ಆ ಸೇವೆಯೊಂದೇ ಭೋಗವುಳ್ಳವನಾಗಿ ಆ ಪಾದಗಳನ್ನು ಎಂದು ತಾನೇ ಸೇವಿಸಬಲ್ಲೆನು ?

ಯಾವಾಗ ಭಗವಂತನು ತನ್ನ ಶೀತಲವಾದ ದೃಷ್ಟಿಯಿಂದ ನನ್ನನ್ನು ನೋಡಿ, ಸ್ನಿಗ್ಧವೂ, ಗಂಭೀರವೂ, ಮಧುರವೂ ಆದ ಮಾತಿನಿಂದ ತನ್ನ ಸೇವೆಯನ್ನು ಮಾಡಲು ಆಜ್ಞಾಪಿಸುವನು ?

— ಶ್ರೀ ರಾಮಾನುಜಾಚಾರ್ಯ

## ಸಂಸ್ಕೃತ ಸೂಕ್ತಿಗಳು

**ಉ**ಪಕಾರಿಗಳಿಗೆ ಉಪಕಾರಿಯಾಗಿರುವುದರಲ್ಲಿ ಒಳ್ಳೆಯತನ ವೇನಿದೆ? ಅಪಕಾರಿಗಳಿಗೆ ಉಪಕಾರ ಮಾಡುವವನೇ ಸಜ್ಜನನು.

-ಪಂಚತಂತ್ರ

**ಧ**ರ್ಮದಿಂದ, ವೇದಾಧ್ಯಯನದಿಂದ, ಶಾಸ್ತ್ರಾಭ್ಯಾಸದಿಂದ ದೊರೆಯಬಹುದಾದ ಫಲವೆಲ್ಲವೂ ಕ್ಷಮೆಯೊಂದರಿಂದ ಕೈಸೇರುತ್ತದೆ.

- ಮಹಾಭಾರತ

**ಕ**ಡೆದರೆ ಮರದ ತುಂಡುಗಳಿಂದ ಬೆಂಕಿ ಹುಟ್ಟುತ್ತದೆ. ಅಗೆದರೆ ನೆಲದ ಆಳದಲ್ಲಿ ನೀರು ಸಿಗುತ್ತದೆ. ಹುರುಪಿನಿಂದ ಕೆಲಸ ಮಾಡುವ ಮಾನವನಿಗೆ ಅಸಾಧ್ಯವೆಂಬುದೇ ಇಲ್ಲ. ಸರಿಯಾದ ಕ್ರಮದಲ್ಲಿ ಮಾಡಿದ ಎಲ್ಲ ಯತ್ನಗಳೂ ಫಲವನ್ನು ಕೊಡುತ್ತವೆ.

-ಭಾಸ ಕವಿ

**ಈ** ಲೋಕದಲ್ಲಿ ಧೀರರು, ಧರ್ಮವನ್ನು ತಿಳಿದವರು, ಶ್ರದ್ಧೆ ಯಿಂದ ಕೂಡಿರುವವರು ತಮ್ಮ ಶರೀರ-ಮಾತು-ಮನಸ್ಸು ಗಳಿಂದ ಉಂಟಾದ ಮಹಾಪಾಪವನ್ನು ಕೂಡ ಬಿದಿರಿನ ಪೊದೆ ಯನ್ನು ಬೆಂಕಿ ಸುಡುವಂತೆ, ಸುಟ್ಟು ಎಸೆಯುತ್ತಾರೆ.

-ಭಾಗವತ

**ನಾ**ಲಗೆಯ ತುದಿಯಲ್ಲಿಯೇ ಲಕ್ಷ್ಮಿ ನೆಲೆಸಿದ್ದಾಳೆ. ಮಿತ್ರರೂ ಬಾಂಧವರೂ ಇರುವುದು ನಾಲಗೆಯ ತುದಿಯಲ್ಲಿಯೇ. ಬಂಧನವೂ ಅದರಿಂದಲೇ; ನಿಜವಾಗಿ ಮರಣವೂ ಅದರಿಂದಲೇ.

-ಸುಭಾಷಿತ

**ಸೋ**ಮಾರಿತನವು ಮನುಷ್ಯರ ಶರೀರದೊಳಗೇ ಇರುವ ದೊಡ್ಡ ಶತ್ರು . ಹಾಗೆಯೇ ಕಾಯಕಕ್ಕೆ ಸಮನಾದ ಬಂಧುವೂ ಇಲ್ಲ. ಕೆಲಸ ಮಾಡುತ್ತಿರುವವನು ಎಂದೂ ಕೆಡುವುದಿಲ್ಲ.

-ಭರ್ತೃಹರಿಯ ನೀತಿಶತಕ



ಜಗದ್ಗುರು ಶ್ರೀಮದ್ವಿರಾಟ್ ಪೂತುಲೂರಿ ವೀರಬ್ರಹ್ಮೇಂದ್ರ ಸ್ವಾಮಿಗಳವರ ಆರಾಧನೆ

ವೈಶಾಖ ಶುದ್ಧ ದಶಮಿ - 5.5.2017

ಸ್ಥಳ: ಕೊಲ್ಲೂರು, ತೆನಾಲಿ (ತಾ), ಗುಂಟೂರು ಜಿಲ್ಲೆ, ಆಂಧ್ರಪ್ರದೇಶ



# ರಾಮಕೃಷ್ಣ ಅದ್ವೈತ ಆಶ್ರಮ, ವಾರಣಾಸಿ

(ರಾಮಕೃಷ್ಣ ಮಠ, ಹೌರಾ ಜಿಲ್ಲೆಯ ಬೇಲೂರು ಮಠದ ಶಾಖಾ ಕೇಂದ್ರ)

**ಪೊ: ಡಿ. 45/6. ಶ್ರೀರಾಮಕೃಷ್ಣ ರೋಡ್, ಲಕ್ಸ, ವಾರಣಾಸಿ - 221 010**

**ಫೋನ್: (0542) 2393975. E-Mail: Varanasi.advita@rkmm.org**

## ಒಂದು ವಿನಮ್ರ ವಿನಂತಿ

**ಪ್ರಿಯ ಭಕ್ತರೆ,**

ವಾರಣಾಸಿಯ ಅದ್ವೈತ ಆಶ್ರಮವು, ಜಗದ್ವಿಖ್ಯಾತ ರಾಮಕೃಷ್ಣ ಮಹಾಸಂಘದ ಒಂದು ಶಾಖಾಕೇಂದ್ರ. ಪವಿತ್ರ ತೀರ್ಥಕ್ಷೇತ್ರವಾದ ವಾರಣಾಸಿಯಲ್ಲಿ ಶಿವಾಂಶ ಸಂಭೂತರೂ ಶ್ರೀರಾಮಕೃಷ್ಣರ ಧೀಮಂತ ಶಿಷ್ಯರೂ ಆದ ಯುಗಾಚಾರ್ಯ ಸ್ವಾಮಿ ವಿವೇಕಾನಂದರ ಆದೇಶದ ಮೇರೆಗೆ, ಅವರ ಸೋದರ ಸಂನ್ಯಾಸಿ ಸ್ವಾಮಿ ಶಿವಾನಂದಜಿ ಮಹಾರಾಜರು ಈ ಮಠವನ್ನು ಜುಲೈ ತಿಂಗಳು 4ನೇ ತಾರೀಖು 1902ರಲ್ಲಿ ಪ್ರಾರಂಭಿಸಿದರು. ಭಗವಾನ್ ಶ್ರೀರಾಮಕೃಷ್ಣರು, ಶ್ರೀಮಾತೆ ಶಾರದಾದೇವಿಯವರು ಮತ್ತು ಸ್ವಾಮಿ ವಿವೇಕಾನಂದರು ಬೋಧಿಸಿದ ಅದ್ವೈತ ವೇದಾಂತದ ಪ್ರಚಾರ ಈ ಮಠದ ಮುಖ್ಯ ಧ್ಯೇಯವಾಗಿದೆ.

ಈ ಆಶ್ರಮವು ಶ್ರೀಮಾತೆಯವರ ಪಾದಧೂಳಿಯಿಂದ ಪವಿತ್ರವಾಗಿದೆ. ಸ್ವಾಮಿ ವಿವೇಕಾನಂದರು, ಬ್ರಹ್ಮಾನಂದರು, ಶಾರದಾನಂದರು ಮತ್ತು ಇತರ ಸೋದರ ಸಂನ್ಯಾಸಿಗಳು ಇಲ್ಲಿಗೆ ಆಗಮಿಸಿ, ತೀರ್ಥಕ್ಷೇತ್ರದಲ್ಲಿರುವ ಈ ಆಶ್ರಮದ ಪವಿತ್ರತೆಯನ್ನು ಇಮ್ಮಡಿಗೊಳಿಸಿದ್ದಾರೆ. ರಾಮಕೃಷ್ಣ ಸಂಘದ ಮೊಟ್ಟ ಮೊದಲ ದೇವಾಲಯವೆನ್ನುವ ಕೀರ್ತಿ ಈ ಮಠಕ್ಕೆ ಸಲ್ಲುತ್ತದೆ. ಇಲ್ಲಿ ಪ್ರತಿಷ್ಠೆಗೊಂಡಿರುವ ಶ್ರೀರಾಮಕೃಷ್ಣರ ಸುಂದರ ಮೂರ್ತಿಯು, ಅವರ ಪ್ರಥಮ ಅಮೃತ ಶಿಲೆಯ ಮೂರ್ತಿಯಾಗಿದೆ.

ಆಶ್ರಮದಲ್ಲಿ ಶ್ರೀರಾಮಕೃಷ್ಣರಿಗೆ ನಿತ್ಯಪೂಜೆ ಮತ್ತು ಅನ್ನಭೋಗದ ವ್ಯವಸ್ಥೆ ಇದ್ದು, ಇಲ್ಲಿ ಎಲ್ಲ ಹಬ್ಬ ಹರಿದಿನಗಳನ್ನೂ ಆಚರಿಸಲಾಗುತ್ತಿದೆ. ಪ್ರತಿದಿನ ಸಂಜೆ ಪ್ರವಚನಗಳು ಇಲ್ಲಿ ನಡೆಯುತ್ತಿವೆ. ಇಲ್ಲಿ ಒಂದು ಗ್ರಂಥಾಲಯವೂ ಇದ್ದು, ಇದರಲ್ಲಿ 17,000 ಪುಸ್ತಕಗಳನ್ನು ಸಂಗ್ರಹಿಸಲಾಗಿದೆ. ಅಗತ್ಯವಿದ್ದಾಗ ಆಶ್ರಮವು ದೀನ-ದರಿದ್ರರ ಸೇವೆಯಲ್ಲಿಯೂ ನಿರತವಾಗಿದೆ. ಕಾಶೀಕ್ಷೇತ್ರದಲ್ಲಿ ವಾಸಿಸಲು ಬಯಸುವ ನಿವೃತ್ತ ಸಾಧುಗಳೂ ಈ ಆಶ್ರಮದಲ್ಲಿ ವಾಸಿಸುತ್ತಿದ್ದಾರೆ. ಈ ಮೇಧಾವಿ ಸಾಧುಗಳು ಹೊರಗೆ ಹೋಗಿ ಅದ್ವೈತ ತತ್ತ್ವಗಳ ಪ್ರಚಾರಲ್ಲಿಯೂ ತೊಡಗುತ್ತಾರೆ.

ಈ ಆಶ್ರಮದ ಮುಖ್ಯ ಕಟ್ಟಡ 125 ವರ್ಷಗಳಿಗಿಂತಲೂ ಹಳೆಯದು. ಇದಕ್ಕೆ ಸೇರಿಕೊಂಡ ಇತರ ಕಟ್ಟಡಗಳೂ ಸಹ 85 ವರ್ಷಗಳಷ್ಟು ಹಿಂದೆ ನಿರ್ಮಾಣಗೊಂಡವು. ಈ ಹಳೆಯ ಮಂದಿರ ಮತ್ತು ಇತರ ಕಟ್ಟಡಗಳಿಗೆ ಅತಿ ಶೀಘ್ರವಾಗಿ ನವೀಕರಣದ ಅಗತ್ಯವಿದೆ. ಗ್ರಂಥಾಲಯದಲ್ಲಿರುವ ಅತ್ಯಂತ ಹಳೆಯ ಪುಸ್ತಕಗಳನ್ನು ಬದಲಾಯಿಸಬೇಕಾದ ಅಗತ್ಯವೂ ಇದೆ. ಆಶ್ರಮದ ಹಲವು ಚಟುವಟಿಕೆಗಳಿಗೆ ಅನಿವಾರ್ಯವಾಗಿ ನಿರಂತರ ವಿದ್ಯುತ್ತಿನ ಪೂರೈಕೆಯ ಅಗತ್ಯವಿದೆ. ಇದರ ನಿರ್ವಹಣೆಗೆ ಸುಲಭವಾದ ಮತ್ತು ಉಪಯುಕ್ತವಾದ 30 KW ಸೋಲಾರ್ ಪವರ್ ಉತ್ಪಾದಕ ಯಂತ್ರವನ್ನು ಆಶ್ರಮದ ಕಟ್ಟಡದ ಮೇಲ್ಭಾಗದಲ್ಲಿ ಸ್ಥಾಪಿಸಲು ಕೂಡ ಯೋಜಿಸಲಾಗಿದೆ.

ಈ ಎಲ್ಲ ಕಾರ್ಯಗಳಿಗೆ ತಗಲುವ ವೆಚ್ಚದ ಅಂದಾಜು ಪಟ್ಟಿ ಈ ರೀತಿ ಇದೆ:

| | | |
|---|---|---|
| 1. | ವಿದ್ಯುತ್ ಚಾಲಿತ ಲಿಫ್ಟ್ | ರೂ. 15,00,000.00 |
| 2. | ಹೊಸಪುಸ್ತಕಗಳ ಖರೀದಿ ಮತ್ತು ಪೀಠೋಪಕರಣಗಳು | ರೂ. 10,00,000.00 |
| 3. | ದೇವಾಲಯ ಮತ್ತು ಕಟ್ಟಡಗಳ ಪುನರ್ನಿರ್ಮಾಣ ಮತ್ತು ನವೀಕರಣ | ರೂ. 25,00,000.00 |
| 4. | 30 KW ಸೋಲಾರ್ ಎಲೆಕ್ಟ್ರಿಸಿಟಿ ಜನರೇಟಿಂಗ್ ಸಿಸ್ಟಮ್ | ರೂ. 30,00,000.00 |
| 5. | ನಿವೃತ್ತ ಸಾಧುಗಳ ಪೋಷಣೆಗೆ ದತ್ತಿ | ರೂ. 50,00,000.00 |
| 6. | ಆಶ್ರಮದ ನಿರ್ವಹಣೆಗೆ ದತ್ತಿ | ರೂ. 30,00,000.00 |
| | **ಒಟ್ಟು** | **ರೂ. 1,60,00,000.00** |

ಈ ಪುಣ್ಯಕಾರ್ಯದಲ್ಲಿ ಭಕ್ತರು, ಹಿತೈಷಿ ಸಾರ್ವಜನಿಕರು, ಲೋಕೋಪಕಾರಿ ಸಂಸ್ಥೆಗಳು ಉದಾರವಾಗಿ ಧನಸಹಾಯ ಮಾಡಬೇಕೆಂದು ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಭಗವತ್ಸೇವೆಯಲ್ಲಿ ನಿಮ್ಮವ

**ಸ್ವಾಮಿ ವಿಶ್ವಾತ್ಮಾನಂದ,**

ಅಧ್ಯಕ್ಷ

ಫೋನ್: 8017229781

ರಾಮಕೃಷ್ಣ ಮಠ ಮತ್ತು ರಾಮಕೃಷ್ಣ ಮಿಷನ್ನಿಗೆ ನೀಡುವ ದೇಣಿಗೆಯ ಮೇಲೆ ಆದಾಯ ತೆರಿಗೆ ಕಾಯಿದೆ 1961 ನಿಯಮ 80ಜಿ ಮೇರೆಗೆ, ಆದಾಯ ತೆರಿಗೆ ರಿಯಾಯಿತಿ ಇರುತ್ತದೆ.

ಚೆಕ್‌ಗಳು ಮತ್ತು ಡ್ರಾಫ್ಟ್‌ಗಳನ್ನು "Ramakrishna Advaita Ashrama, Varanasi" ಎಂದು ನಮೂದಿಸಿ ಕಳುಹಿಸಲು ಕೋರಿದೆ. ಇದರಲ್ಲಿ PAN ನಂಬರ್‌ನ್ನು ತಪ್ಪದೆ ನಮೂದಿಸಬೇಕು.

ನೆಟ್ ಬ್ಯಾಂಕಿಂಗ್ ಮೂಲಕ ಹಣವನ್ನು ನೇರ ವರ್ಗಾವಣೆ ಮಾಡಲು ಅಗತ್ಯವಾದ ವಿವರಗಳು:

1. ಇಂಡಿಯನ್ ಬ್ಯಾಂಕ್, ಗುದೋಲಿಯ ಮಿಸ್ಸರ್‌ಪೋಖ, ಗುದೋಲಿಯ, ವಾರಣಾಸಿ.
   Account No: 449844434, IFSC Code: IDIB000G035
2. ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ, ಜಂಗಮವಾಡಿ, ವಾರಣಾಸಿ, ಗುದೋಲಿಯ.
   Account No: 10528315009, IFSC Code: SBI N0001190

ಮೇಲಿನಂತೆ ಹಣ ಸಂದಾಯ ಮಾಡುವವರು ತಪ್ಪದೆ ಇ-ಮೇಲ್ ಅಥವ ಪತ್ರದ ಮೂಲಕ ವಿವರಗಳನ್ನು PAN ಕಾರ್ಡ್ ಸಂಖ್ಯೆಯೊಂದಿಗೆ ತಿಳಿಸಿದರೆ, ಹಣ ಸಂದ ರಸೀತಿಯನ್ನು ಕಳುಹಿಸಲಾಗುವುದು.



ಸಂಪಾದಕೀಯ

# ‘ಜಗವೆಲ್ಲ ಮಲಗಿರಲು ಅವನೊಬ್ಬನೆದ್ದ..’



“ಉಪನಿಷತ್ತಿನಲ್ಲಿ ಯಾವ ಭಾವನೆಯನ್ನು ಎಲ್ಲೋ ಕೆಲವರಿಗಾಗಿ ಮೀಸಲಾಗಿಟ್ಟಿದ್ದರೋ ಅದನ್ನು ಎಲ್ಲರಿಗೂ ಬಹಿರಂಗಪಡಿಸಿದವನು ಬುದ್ಧ. ನಿರ್ವಾಣ ಸಿದ್ಧಾಂತದಿಂದ ಅವನ ದೊಡ್ಡಸ್ತಿಕೆ ಏನೂ ಏರುವುದಿಲ್ಲ. ಅವನ ಮಹಿಮೆ ಇರುವುದು ಅಸದೃಶವಾದ ಅನುಕಂಪದ ಮೇಲೆ. ಬೌದ್ಧಧರ್ಮಕ್ಕೆ ಕಳೆ ಕೊಡುವ ಉತ್ತಮ ದರ್ಜೆಯ ಸಮಾಧಿ ಮುಂತಾದುವುಗಳಲ್ಲಿ ಬಹುಪಾಲು ಆಗಲೇ ವೇದಗಳಲ್ಲಿವೆ. ಅಲ್ಲಿ ಇಲ್ಲದೇ ಇರುವುದು ಬುದ್ಧನ ಬುದ್ಧಿ ಮತ್ತು ಹೃದಯ. ಪ್ರಪಂಚದ ಇತಿಹಾಸದಲ್ಲೇ ಅವನಿಗೆ ಸರಿಸಮನಾದ ವ್ಯಕ್ತಿ ಮತ್ತೊಬ್ಬ ಜನಿಸಿಲ್ಲ” — ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ.

ಪ್ರಪಂಚದ ಇತಿಹಾಸದಲ್ಲಿ ಉದಿಸಿ ಬಂದ ಮಹಾತ್ಮರಲ್ಲೆಲ್ಲ ಬುದ್ಧನು ಬೆಳಗುವ ಉಜ್ವಲ ತಾರೆಯಂತಿರುವನು. ಆಧ್ಯಾತ್ಮಿಕ ಅನ್ವೇಷಕನಾಗಿ, ಒಂದು ಹೊಸ ಧರ್ಮದ ಸ್ಥಾಪಕನಾಗಿ, ಸಹಸ್ರಾರು ಮಂದಿ ಸಾಧಕರಿಗೆ ಗುರುವಾಗಿ, ಎಲ್ಲಕ್ಕಿಂತ ಮುಖ್ಯವಾಗಿ ಸಮಸ್ತ ಮನುಕುಲದ ಉದ್ಧಾರಕನಾಗಿ ಬೆಳಗಿದವನೇ ಭಗವಾನ್ ಬುದ್ಧ. ಅವನ ಪ್ರೀತಿಯ, ಅನುಕಂಪದ ಭಾವನೆಗಳು ಜಾತಿ, ಪಂಗಡ, ಲಿಂಗ, ಅಂತಸ್ತುಗಳ ಭೇದವಿಲ್ಲದೆ ಎಲ್ಲರ ಕಡೆಗೂ ಹರಿದವು. ಕೇವಲ ಮನುಷ್ಯರಷ್ಟೇ ಅಲ್ಲ, ಪ್ರಾಣಿಪಕ್ಷಿಗಳೂ ಸಸ್ಯಜಾತಿಗಳೂ ಅವನ ಅನುಕಂಪೆಗೆ ಪಾತ್ರವಾದವು. ಇಂತಹ ಸಮಗ್ರತೆ, ವಿಶ್ವವನ್ನೇ ತಬ್ಬುವ ಸಮದರ್ಶನ, ಜೀವಿಗಳ ನೋವಿಗೆ ಮಿಡಿಯುವ ದಯಾರ್ದ್ರ ಹೃದಯ ಇನ್ನೆಲ್ಲಿ ಕಾಣಸಿಗುವುದು?

### ಮೂರು ಹಂತಗಳು

ಬುದ್ಧನ ಸುದೀರ್ಘ ಜೀವನದಲ್ಲಿ ಮೂರು ಹಂತಗಳನ್ನು ಕಾಣುತ್ತೇವೆ. ಮೊದಲನೆಯದು, ರಾಜಕುಮಾರ ಸಿದ್ಧಾರ್ಥನಾಗಿ ಅವನು ಪ್ರಪಂಚದ ವೈಭೋಗಗಳಲ್ಲಿ ಮುಳುಗಿದ್ದ ಕಾಲ. ಲೋಕದ ಕಠೋರ ಸತ್ಯಗಳು ಅವನ ಕಣ್ಣಿಗೆ ಬೀಳದಂತೆ ಅವನ ಬಂಧುಬಳಗವೆಲ್ಲ ಅವನನ್ನು ಜೋಪಾನವಾಗಿ ನಡೆಸಿಕೊಂಡಿತು. ಇದೇ ಜಗತ್ತಿನ ವಿಡಂಬನೆ! ಮುಂದೆ ಇವನು ಸಂನ್ಯಾಸಿಯಾಗುತ್ತಾನೆ ಎಂದು ಅವನ ಭವಿಷ್ಯವನ್ನು ಹೇಳಿದ್ದರು ಜ್ಯೋತಿಷಿಗಳು. ಹಾಗಾಗದಂತೆ ತಡೆದರು; ಸಿದ್ಧಾರ್ಥನು ಓಡಾಡುವ ಜಾಗದಲ್ಲೆಲ್ಲ ರೋಗಿ, ವೃದ್ಧ ಅಥವಾ ಹೆಣ ಅವನ ಕಣ್ಣಿಗೆ ಬೀಳದಂತೆ ಮಾಡಿ ಕೆಲವು ವರ್ಷ ತಡೆದರು. ಸಿದ್ಧಾರ್ಥನಿಗೆ ವಿವಾಹವಾಯಿತು; ಪ್ರಪಂಚದ ಸುಖದಲ್ಲಿ ಅವನು ಮುಳುಗಿಹೋದ. ಆದರೂ ವಿಧಿಯ ಲೀಲೆ ಬೇರೆಯೇ ಆಗಿತ್ತು. ಸಂಚಾರಕ್ಕೆ ಹೋಗಿದ್ದವನಿಗೆ ರೋಗಿಯೊಬ್ಬ ಕಾಣಿಸಿಕೊಂಡ; ಮುಂದೆ ವೃದ್ಧ, ಹೆಣ ಕೂಡ ಕಾಣಿಸಿದವು. ಅದೇನೆಂದು ಅರಿಯದ ಸಿದ್ಧಾರ್ಥ ತನ್ನ ಸಾರಥಿ ಚೆನ್ನನಿಂದ ಅವುಗಳ ಬಗ್ಗೆ ಕೇಳಿ ತಿಳಿದುಕೊಂಡ. ಅಷ್ಟೇ ಸಾಕಾಯಿತು; ಪ್ರಪಂಚದ ನಶ್ವರತೆ, ದುಃಖ ಹಾಗೂ ಮರಣದ ದಾರುಣತೆ ಅವನ ಹೃದಯವನ್ನು ನಾಟಿತು. ಇಡೀ ಜಗತ್ತನ್ನೇ ನುಂಗಿ ನೊಣೆಯುವ ಮೃತ್ಯುವನ್ನು ಮೀರಿಹೋಗುವ ಬಯಕೆ ಅವನಲ್ಲಿ ಉದಿಸಿತು. ಇದು ಅವನ ಬದುಕಿನ ಮೊದಲ ಹಂತ.

ಆ ಕ್ಷಣದಲ್ಲಿ ಬುದ್ಧನಲ್ಲಿ ಉದಯಿಸಿದ ವೈರಾಗ್ಯ, ಸತ್ಯಾನ್ವೇಷಣೆಯ ಪ್ರಬಲ ಆಕಾಂಕ್ಷೆ, ಎಲ್ಲ ದುಃಖಗಳಿಂದ ಜಗತ್ತನ್ನು ಪಾರುಮಾಡಬೇಕೆಂಬ ದೃಢನಿಶ್ಚಯ ಅವನನ್ನು ಅಸಾಧಾರಣ ತ್ಯಾಗಕ್ಕೆ ಅಣಿಮಾಡಿತು. ತರುಣಿ ಪತ್ನಿ, ನವಜಾತ ಶಿಶು ಇವುಗಳನ್ನು ತ್ಯಜಿಸಿ, ಆತ್ಮಸಾಕ್ಷಾತ್ಕಾರದ ಪಥದಲ್ಲಿ ಮುನ್ನಡೆದ ಬುದ್ಧ. ಮುಂದೆ ಅವನು ಹಲವು ಬಗೆಯ ಸಾಧಕರನ್ನು ಕಂಡ, ಹಲವರ ಮಾರ್ಗದರ್ಶನ ಪಡೆದ. ಅನೇಕ ಬಗೆಯ ಆಧ್ಯಾತ್ಮಿಕ ಸಾಧನೆಗಳನ್ನೂ ಕೈಗೊಂಡ. ಯಾವುದರಿಂದಲೂ ಅವನಿಗೆ ಸತ್ಯ ಗೋಚರಿಸದೆ ಹೋದಾಗ, ಅವನು ತನ್ನದೇ ಆದ ಮಾರ್ಗವನ್ನು ಹಿಡಿದು ಮುನ್ನಡೆದ. ಹಲವು ಕಂಟಕಗಳ, ಆಸೆ-ಆಮಿಷಗಳ, ಮಹಾ

ಮಾಯಾವಿಯ ತೊಂದರೆಗಳನ್ನೆಲ್ಲ ದಾಟಿ ಮುಂದೆ ಸಾಗಿದ. ಆತ್ಯಂತಿಕ ಸತ್ಯವೇನೆಂಬುದನ್ನು ಸಾಕ್ಷಾತ್ಕರಿಸಿಕೊಳ್ಳುವವರೆಗೂ ತಾನು ಧ್ಯಾನಕ್ಕೆ ಕುಳಿತಲ್ಲಿಂದ ಏಳಲಾರೆ— ಎಂಬ ದೃಢ ನಿಶ್ಚಯ ಮಾಡಿದ. ಕೊನೆಗೊಂದು ದಿನ ಅವನು ಬೆಳಕನ್ನು ಕಂಡ; ನಶ್ವರ ಜಗತ್ತಿನ ಆಚೆಗೆ, ಶೂನ್ಯದಲ್ಲಿ ಅಡಗಿರುವ ಸತ್ಯವನ್ನು ಕಂಡ. ಸಿದ್ಧಾರ್ಥ 'ಬುದ್ಧ'ನಾದ; ಜಗತ್ತಿಗೆ ಜ್ಞಾನದ ಬೆಳಕನ್ನು ಹರಡಿದ ಜ್ಞಾನಸೂರ್ಯನಾದ. ಇದು ಸಾಧನೆಯ ಘಟ್ಟ; ಬುದ್ಧನ ಜೀವನದ ಎರಡನೇ ಹಂತ.

ಮೂರನೆಯ ಹಂತ ಬುದ್ಧನ ಜೀವನದಲ್ಲಿ ದೀರ್ಘವಾದ ಅವಧಿ; ಅದರಲ್ಲಿ ಅವನು ಗುರುವಾಗಿ ನಿರಂತರ ಬೋಧನೆ ಮಾಡುತ್ತಾ ಹೋದ. ಎಲ್ಲೆಡೆ ಶಾಂತಿ, ಸತ್ಯ, ದಯೆ-ಧರ್ಮಗಳ ಸಂದೇಶವನ್ನವನು ಪಸರಿಸುತ್ತ ಹೋದ. ಅಲ್ಲಿ ಆನಂದನಂತಹ ಸಂಬಂಧಿಕರು ಬರುತ್ತಾರೆ, ಸಾರಿಪುತ್ರನಂತಹ ಬ್ರಾಹ್ಮಣರು ಬರುತ್ತಾರೆ; ಕಿಸಾಗೌತಮಿಯಂತಹ ಮುಗ್ಧ ಹೆಂಗಸು, ಆಮ್ರಪಾಲಿಯಂತಹ ವೇಶ್ಯೆ, ಅಂಗುಲಿಮಾಲನಂತಹ ಕ್ರೂರಿ — ಇವರೆಲ್ಲ ಬರುತ್ತಾರೆ. ಬುದ್ಧನು ಸ್ಥಾಪಿಸಿದ ಸಂನ್ಯಾಸಿಗಳ ಸಂಘ ಬೆಳೆಯಿತು, ಬೌದ್ಧಧರ್ಮ ವಿಸ್ತಾರಗೊಂಡಿತು. ತ್ಯಾಗ, ವೈರಾಗ್ಯಗಳ ಬೋಧನೆ, ನಿರ್ವಾಣಕ್ಕಾಗಿ ಸಾಧನೆ, ಮಾನವರೆಲ್ಲರ ದುಃಖನಿವಾರಣೆ— ಈ ದಿಕ್ಕಿನಲ್ಲಿ ಹೊಸ ಧರ್ಮ ಏಷ್ಯಾಖಂಡದುದ್ದಕ್ಕೂ ವ್ಯಾಪಿಸಿತು. ಕವಿಯೊಬ್ಬನು ತನ್ನ ಕಾವ್ಯದಲ್ಲಿ ಬುದ್ಧನನ್ನು 'ಏಷ್ಯಾದ ಬೆಳಕು' ಎಂದೇ ಕರೆದ. ಇದು ಕೊನೆಯ ಹಂತ; ಬುದ್ಧನ ಮಹಾ ಪರಿನಿರ್ವಾಣದಲ್ಲಿ ಅದು ಧನ್ಯತೆಯನ್ನು ಪಡೆಯಿತು.

ಬುದ್ಧನ ಜೀವನದ ಈ ಮೂರು ಹಂತಗಳನ್ನು ಒಟ್ಟು ಬದುಕಿನ ಹಂತಗಳು ಎಂಬಂತೆ ಕಾಣಬಹುದು. ಮೊದಲು ಪ್ರಾಪಂಚಿಕತೆ, ಜಗತ್ತಿನ ಸುಖಭೋಗಗಳ ಅನುಭವ, ಹಾಗೂ ತತ್ತ್ವ-ವಿಚಾರ ದರ್ಶನಗಳಿಲ್ಲದ ಲೌಕಿಕ ಜೀವನ. ಅನಂತರ ಕಠೋರ ಸತ್ಯದ ಮಿಂಚುನೋಟ, ಅನಿರೀಕ್ಷಿತ ಆಘಾತ; ದುಃಖಮಯ ಬದುಕನ್ನು ಮೀರಿ ಹೋಗುವ ಅನ್ವೇಷಣೆ. ಕೊನೆಯಲ್ಲಿ ಸತ್ಯದರ್ಶನ, ಶಾಶ್ವತ ಶಾಂತಿ, ಆನಂದಗಳನ್ನು ನೀಡುವ ನಿರ್ವಾಣ. ಪ್ರಪಂಚವು ವಿಕಾಸದ ಪಥದಲ್ಲಿ ಸಾಗುವ ರೀತಿಯೇ ಹೀಗೆ. ಮೊದಲು ಪ್ರಾಪಂಚಿಕತೆ, ಅನಂತರ ಅನ್ವೇಷಣೆ, ಕೊನೆಯಲ್ಲಿ ಸತ್ಯದ ಸಾಕ್ಷಾತ್ಕಾರ. ಈ ಮೂರು ಹಂತಗಳನ್ನು ಒಬ್ಬ ವ್ಯಕ್ತಿಯ ಜೀವನದಲ್ಲೂ ಕಾಣಬಹುದು, ಒಂದು ಸಮಾಜದಲ್ಲೂ ಗುರುತಿಸಬಹುದು. ಇವೆಲ್ಲವನ್ನೂ ಸಂಕೇತಿಸುವ ಬುದ್ಧನ ಬದುಕು ನಿಜವಾದ ಅರ್ಥದಲ್ಲಿ ಒಂದು ಪರಿಪೂರ್ಣ ಬದುಕು. ತನ್ನ ಬದುಕನ್ನೇ ಉದಾಹರಣೆಯಾಗಿ ಇಟ್ಟುಕೊಂಡು, ಜಗತ್ತಿಗೆ ದಾರಿ ತೋರಿದ ಬುದ್ಧ.

## ಆನೆ ನಡೆದುದೇ ದಾರಿ

ಬುದ್ಧನನ್ನು ಯುಗಪ್ರವರ್ತಕನೆಂದು ನಿಸ್ಸಂದೇಹವಾಗಿ ಕರೆಯಬಹುದು. ಅನೇಕ ಸಮಯದಿಂದ ಜಡವಾಗಿ ಹೋದ ಸಮಾಜ ಒಂದೇ ರೀತಿಯಲ್ಲಿ ನಡೆಯುತ್ತದೆ; ಹಳೆಯ ಪದ್ಧತಿ, ಸಂಪ್ರದಾಯಗಳು ಬಲಿಷ್ಠವಾದಷ್ಟೂ ಹೊಸ ಬದಲಾವಣೆ ಉಂಟಾಗದಂತೆ ತಡೆಯುತ್ತದೆ. ಬುದ್ಧನ ಕಾಲದಲ್ಲೂ ಸಮಾಜ ಹಾಗೆಯೇ ಇತ್ತು. ವೈದಿಕ ಪರಂಪರೆಯ ಧರ್ಮ ಕೇವಲ ಆಚರಣೆ, ಅಂಧಾನುಸರಣೆ ಹಾಗೂ ಕುರುಡು ನಂಬಿಕೆಗಳಿಂದಾಗಿ ತನ್ನ ನೈಜ ಸತ್ತ್ವವನ್ನು ಕಳೆದುಕೊಂಡಿತ್ತು. ಅದಕ್ಕಿಂತ ಭಿನ್ನವಾಗಿ ಆಲೋಚಿಸಿದ ಬುದ್ಧ, ತನ್ನದೇ ಆದ ಹೊಸ ದಾರಿಯನ್ನು ತುಳಿದ. ಅಲ್ಲಿ ಅವನಿಗೆದುರಾದ ಸವಾಲುಗಳು, ಸಂಘರ್ಷಗಳು ಅವನ ಅನ್ವೇಷಣೆಯನ್ನು ವಿಚಲಿತಗೊಳಿಸಲಿಲ್ಲ. ಸತ್ಯದರ್ಶನಕ್ಕಾಗಿ ದೃಢ ನಿರ್ಧಾರ, ತ್ಯಾಗ-ವೈರಾಗ್ಯ, ಸತತ ಪ್ರಯತ್ನ— ಇವುಗಳನ್ನು ಆತ ಮೈಗೂಡಿಸಿಕೊಂಡಿದ್ದ. ಈ ಮೂಲಕ ಅವನು ಯಾವ ಹಳೆಯ ಮಾರ್ಗವನ್ನೂ ಅನುಸರಿಸದೆ, ತನ್ನ ಅನುಭವಗಳಿಂದಲೇ ಕಲಿತು ಹೊಸ ದಾರಿಯನ್ನು ಕಂಡುಕೊಂಡ. ದುರ್ಗಮವಾದ ಅರಣ್ಯದಲ್ಲಿ ಒಂಟಿಸಲಗ ಸಾಗುವ ದಾರಿ ಅನೇಕ ವೇಳೆ ದಾರಿಯೇ ಆಗಿರುವುದಿಲ್ಲ; ಅದು ದಾರಿಯನ್ನು ನಿರ್ಮಿಸುತ್ತ ಸಾಗುತ್ತದೆ. ಹಾಗೆ ನಿರ್ಮಿಸುವಾಗ ಅದಕ್ಕೆ ಎದುರಾದ ಅಡೆತಡೆಗಳೆಲ್ಲವೂ ಧ್ವಂಸವಾಗುತ್ತವೆ. ಹೊಸದಾಗಿ ನಿರ್ಮಾಣಗೊಂಡ ಆ ದಾರಿ ಇನ್ನೂ ಅನೇಕ ಪ್ರಾಣಿಗಳಿಗೆ ಅನುಕೂಲವಾಗುತ್ತದೆ. ಬುದ್ಧ ಸಾಗಿರುವ ರೀತಿ ಹೀಗೆ. ತಾನು ಕಂಡ ದಾರಿಯನ್ನು ಅವನು ತನ್ನಲ್ಲೇ ಗುಪ್ತವಾಗಿ ಇರಿಸಲಿಲ್ಲ, ಅಥವಾ ಕೆಲವೇ ಮಂದಿ ತನ್ನವರಿಗಾಗಿ ಮೀಸಲಿಡಲಿಲ್ಲ. ಆ ಬೆಳಕಿನ ದಾರಿಯನ್ನು ಸಮಸ್ತ ಮಾನವರಿಗೂ ತೆರೆದ. ಬುದ್ಧನ ಶ್ರೇಷ್ಠತೆಯಿರುವುದೇ ಇಲ್ಲಿ. ಸತ್ಯವನ್ನು ಕಂಡುಕೊಳ್ಳುವ ಪ್ರಚಂಡ ಇಚ್ಛಾಶಕ್ತಿ, ಅದಕ್ಕೆ ಸರಿಸಮವಾಗಿ ಅದ್ಭುತ ಬುದ್ಧಿಶಕ್ತಿ ಅವನಲ್ಲಿದ್ದವು. ಆದರೆ ಅದರೊಂದಿಗೆ ತಾನು ಕಂಡ ಸತ್ಯದ ದಾರಿಯನ್ನು ಸಮಸ್ತರಿಗೂ ತೋರಿಸಿಕೊಡುವ ಅಸೀಮ ಹೃದಯವಂತಿಕೆ ಬುದ್ಧನಲ್ಲಿತ್ತು. ಅವನನ್ನು ವಿಶ್ವಗುರುವಾಗಿಸಿದ್ದು ಈ ಅಪೂರ್ವ ಗುಣವೇ.

## ವೈಜ್ಞಾನಿಕ ಮನೋಭಾವ

ಬುದ್ಧನ ಕಾಲಕ್ಕೆ ವಿಜ್ಞಾನ ಇಂದಿನಂತೆ ಬೆಳೆದಿರಲಿಲ್ಲ, ನಿಜ. ಆದರೆ ಆಗಿನ ಕಾಲದಲ್ಲಿ ಜಗತ್ತು ತನ್ನದೇ ಆದ ರೀತಿಯಲ್ಲಿ ಹಲವು ಬಗೆಯ ಜ್ಞಾನಶಾಖೆಗಳನ್ನು ಹೊಂದಿತ್ತು. ಇಂದಿಗೂ ಅಂದಿಗೂ ವ್ಯತ್ಯಾಸವಿರುವುದು ವೈಜ್ಞಾನಿಕ ಆವಿಷ್ಕಾರಗಳಲ್ಲಿ ಹಾಗೂ ಅವುಗಳ ಮೂಲತತ್ತ್ವಗಳ ಅನ್ವೇಷಣೆಯಲ್ಲಿ. ಆದರೆ ಮಾನವನ ಬೌದ್ಧಿಕ ಮನೋಭಾವ, ಆಲೋಚನೆಯ ಕ್ರಮಗಳಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲ. ಪ್ರಖರ ಬುದ್ಧಿವಂತಿಕೆಯುಳ್ಳ, ಸಮತೋಲನದ ಚಿಂತನೆಯುಳ್ಳ ಜ್ಞಾನಿಗಳು ಇಂದೂ ಇದ್ದಾರೆ; ಹಿಂದೆಯೂ ಇದ್ದರು. ಅಂತೆಯೇ ಸಂಪ್ರದಾಯಶರಣರೂ, ಕೆಲವು ಬೌದ್ಧಿಕ ಸತ್ಯಗಳನ್ನು ಸಮಾಜದ ಮುಂದೆ ಹೇಳಲು ಹಿಂಜರಿಯುವವರೂ ಆದ ಜ್ಞಾನಿಗಳು ಇಂದೂ ಇದ್ದಾರೆ, ಹಿಂದೆಯೂ ಇದ್ದರು. ಬುದ್ಧ ಮೊದಲ ರೀತಿಯ ಬೌದ್ಧಿಕ ವ್ಯಕ್ತಿ. ಹೊಸ ವಿಚಾರಗಳನ್ನು ಕಂಡುಕೊಳ್ಳುವಲ್ಲಿ

ಜಡ ತತ್ತ್ವಗಳನ್ನು ತ್ಯಜಿಸಲು ಅವನು ಹಿಂಜರಿಯಲಿಲ್ಲ. ಅದೇ ರೀತಿ ಆ ತತ್ತ್ವಗಳನ್ನು ನಿರ್ಭೀತಿಯಿಂದ ಸಾರಿದ, ಅಸಂಬದ್ಧ ತತ್ತ್ವಗಳನ್ನು ಖಂಡಿಸಿದ. ಎಲ್ಲದಕ್ಕಿಂತಲೂ, ಇತರರಿಗೆ ಸತ್ಯವನ್ನು ತಿಳಿಸಿಕೊಡುವಾಗ ಅವನು ಬಳಸುವ ವಿಧಾನ, ಸಂಯಮದ ವಿಚಾರ ಮಂಡನೆ ಹಾಗೂ ಅನುಕಂಪೆಯ ಭಾವನೆ— ಇವು ಅವನ ವ್ಯಕ್ತಿತ್ವವನ್ನು ಇನ್ನಷ್ಟು ಎತ್ತರಕ್ಕೇರಿಸುತ್ತವೆ. ಜನರಿಂದ ದೂರವಾಗುವ ಕ್ಲಿಷ್ಟ ಭಾಷೆ, ತರ್ಕ-ವಿತರ್ಕ, ಗೂಢಾರ್ಥಗಳನ್ನು ಬಳಸದೆ, ಜನಸಾಮಾನ್ಯರ ಮಾತಿನಲ್ಲೇ ಬುದ್ಧ ತನ್ನ ಉಪದೇಶ ಗಳನ್ನು ನೀಡಿದ. ನೇರವಾಗಿ ಜನರಿಗೆ ಅರ್ಥವಾಗುವಂತೆ ಕಥೆ, ಉಪಮೆ, ದೃಷ್ಟಾಂತಗಳನ್ನು ಬಳಸಿ ತನ್ನ ಬೋಧನೆಗಳನ್ನು ನೀಡಿದ. ಪಾಂಡಿತ್ಯ ಪ್ರದರ್ಶನವಲ್ಲ, ವಿಷಯವನ್ನು ದಾಟಿಸು ವಿಕೆಯೇ ಮುಖ್ಯವೆಂಬುದನ್ನು ಬುದ್ಧ ತೋರಿಸಿಕೊಡುತ್ತಾನೆ. ತನ್ನ ಜೀವನ, ನಡೆನುಡಿ, ಮಾತು— ಎಲ್ಲದರಲ್ಲೂ ತನ್ನ ಅನುಭವ ಹಾಗೂ ಸತ್ಯದರ್ಶನದ ಮೇಲೆ ತನಗಿದ್ದ ಪ್ರಾಮಾಣಿಕ ಶ್ರದ್ಧೆ ಯನ್ನು ಅವನು ಎಲ್ಲೆಡೆ ಬಿಂಬಿಸಿದ. ಈ ಕಾರಣದಿಂದಲೇ ಅವನ ತತ್ತ್ವ ಹಾಗೂ ಧರ್ಮ ಅಷ್ಟೊಂದು ವ್ಯಾಪಕವಾಗಿ ಪ್ರಸಾರ ಗೊಂಡವು.

### ಕೆಲವು ಅಡಚಣೆಗಳು

ಆದರೆ ಭಾರತದಲ್ಲೆಡೆ ವ್ಯಾಪಿಸಿದ್ದ ಬೌದ್ಧಧರ್ಮ ಕ್ರಮೇಣ ಅವನತಿಯ ಮಾರ್ಗ ಹಿಡಿಯುವುದರ ಸೂಚನೆ ಬುದ್ಧನ ಜೀವ ನದ ಕೊನೆಕೊನೆಗೆ ಕಂಡುಬಂತು. ತನ್ನ ಹೊಸ ಧರ್ಮಕ್ಕೆ ಸೇರಿ ದವರೆಲ್ಲರೂ ಸಂನ್ಯಾಸ ಸ್ವೀಕರಿಸುವಂತೆ ಬುದ್ಧ ಪ್ರೇರೇಪಿಸಿದ. ಇದರಿಂದ, ಆಧ್ಯಾತ್ಮಿಕವಾಗಿ ಹಲವು ಹಂತಗಳಲ್ಲಿರುವ ವಿವಿಧ ಬಗೆಯ ಮನಸ್ಸುಗಳಿಗೆಲ್ಲ ಸಮಾನ ಮಾರ್ಗದಲ್ಲಿ ಮುನ್ನಡೆ ಯಲು ಹೇಳಿದಂತಾಯಿತು. ಇದು ನಿಧಾನವಾಗಿ ಪ್ರತಿಕೂಲ ಪರಿಣಾಮಗಳನ್ನು ಬೀರತೊಡಗಿತು. ಹಿಂದೂಧರ್ಮದಲ್ಲಿ ಹಲವು ನೆಲೆಗಳಲ್ಲಿ ಹಲವು ಹಂತದ ಜನರಿಗೆ ಅನುಕೂಲವಾಗುವಂತೆ ಅನೇಕ ಬಗೆಯ ಧಾರ್ಮಿಕ ನಡವಳಿಕೆಗಳನ್ನು ನೀಡಲಾಗಿದೆ; ವ್ರತ, ಪೂಜೆ, ಹವನಾದಿಗಳಿಂದ ಹಿಡಿದು ಧ್ಯಾನ-ಧಾರಣ-ಸಮಾಧಿಯವರೆಗೆ ಅನೇಕ ರೀತಿಯ ಸಾಧನೆಗಳು ಅಲ್ಲಿವೆ. ಬ್ರಹ್ಮ ಚರ್ಯ, ಗಾರ್ಹಸ್ಥ್ಯವೇ ಮೊದಲಾದ ವಿವಿಧ ಆಶ್ರಮಗಳೂ, ಸಾತ್ತ್ವಿಕ, ರಾಜಸ, ತಾಮಸ ಗುಣಗಳ ವೈವಿಧ್ಯಗಳಿಗೆ ಅನುಸಾರ ವಾಗಿ ಕರ್ಮಯೋಗ, ರಾಜಯೋಗ, ಭಕ್ತಿಯೋಗವೇ ಮೊದ ಲಾದ ಯೋಗಗಳೂ ಅಲ್ಲಿವೆ. ಈ ರೀತಿ ವೈವಿಧ್ಯಗಳಿಂದ ಕೂಡಿದ ಧಾರ್ಮಿಕ ಆಚರಣೆಗಳ ಹಿಡಿತ ಬುದ್ಧನ ಮಾರ್ಗದಲ್ಲಿ ಇಲ್ಲದುದು ದೊಡ್ಡ ಒಂದು ಕೊರತೆಯಾಗಿಬಿಟ್ಟಿತು. ಕ್ರಮೇಣ ಸಂನ್ಯಾಸೀ ಭಿಕ್ಷುಗಳ ಜೀವನದಲ್ಲಿ ಕೂಡ ಅವನತಿಯ ಚಿಹ್ನೆಗಳು ಕಾಣಿಸಿ ಕೊಂಡವು. ಬುದ್ಧನ ಅಸಾಧಾರಣ ತತ್ತ್ವಗಳನ್ನು ಜೀರ್ಣಿಸಿ ಕೊಳ್ಳಬಲ್ಲ ಕೆಲವು ಮಂದಿ ಶ್ರೇಷ್ಠಮಟ್ಟದ ಸಾಧಕರಿಗೆ ಮಾತ್ರ ಅದೊಂದು ಅನುಪಮ ಮಾರ್ಗವೆನಿಸಿತು. ಹಿಂದಿನಿಂದಲೂ ಮುಂದುವರಿದುಕೊಂಡು ಬಂದಿದ್ದ ಸನಾತನ ತತ್ತ್ವಗಳ ಹೊಸ ಆವೃತ್ತಿಯೆಂಬಂತೆ, ಅಥವಾ ಅದಕ್ಕೆ ಒಂದು ಹೊಸ ಜೋಡಣೆ ಯಂತೆ ಈ ಮಾರ್ಗ ಬೆಳೆದು ಬಂದಿದ್ದರೆ, ಮುಂದೆ ಬೌದ್ಧಧರ್ಮ ಭಾರತದಿಂದ ಕಣ್ಮರೆಯಾಗುವಂಥ ಪ್ರಸಂಗ ಎದುರಾಗುತ್ತಿರ ಲಿಲ್ಲವೋ ಏನೋ. ಆದರೆ ಬುದ್ಧನೆಂಬ ಮಹಾತ್ಮ ಇಲ್ಲಿ ದೇವತೆ ಯಾಗಿ ಪೂಜಿಸಲ್ಪಟ್ಟ; ಅವತಾರವೆಂದೇ ಕರೆಯಲ್ಪಟ್ಟ. ವಿಶ್ವವಿಶಾಲ ತತ್ತ್ವ, ಆದರ್ಶಗಳಿದ್ದೂ ಸಮಾಜದ ವೈವಿಧ್ಯಗಳಿಗೆ ಅವನ್ನು ಅಳ ವಡಿಸಲಾಗದ ಕಾರಣ, ಆ ತತ್ತ್ವ ಇಲ್ಲಿ ಮುಂದುವರಿಯದೆ ಹೋಯಿತು.

ಸ್ವಾಮಿ ವಿವೇಕಾನಂದರು ಈ ವಿಷಯವನ್ನು ಕುರಿತು ಹೇಳುತ್ತಾರೆ:

''ತೋರಿಕೆಗೆ ಬೌದ್ಧಧರ್ಮ ಭಾರತದಿಂದ ಮಾಯವಾಗಿದೆ, ಆದರೆ ನಿಜವಾಗಿ ಹಾಗಾಗಿಲ್ಲ. ಬುದ್ಧನ ಬೋಧನೆಯಲ್ಲಿ ಒಂದು ಅಪಾಯಕರವಾದ ಅಂಶವಿತ್ತು— ಬೌದ್ಧಧರ್ಮವು ಒಂದು ಸುಧಾರಕ ಧರ್ಮ. ದೊಡ್ಡ ಒಂದು ಆಧ್ಯಾತ್ಮಿಕ ಬದಲಾವಣೆ ಯನ್ನು ತರುವುದಕ್ಕಾಗಿ ಎಷ್ಟೋ ನಿಷೇಧಾತ್ಮಕವಾದ ಬೋಧನೆ ಗಳನ್ನು ಕೊಡಬೇಕಾಯಿತು. ಒಂದು ಧರ್ಮ ಕೇವಲ ನಿಷೇಧದ ಭಾಗವನ್ನೇ ಒತ್ತಿ ಹೇಳುತ್ತಿದ್ದರೆ ಅದು ಕೊನೆಗೆ ನಾಶವಾಗುವ ಅಪಾಯವಿದೆ. ಒಂದು ಸುಧಾರಕ ಪಂಥವು ಕೇವಲ ಸುಧಾರಣೆ ಯಲ್ಲಿಯೇ ನಿರತವಾಗಿದ್ದರೆ ಅದು ಜೀವಂತವಾಗಿರಲಾರದು. ಜೀವನ-ಪೋಷಕವಾದ ನಿಜವಾದ ಸ್ಫೂರ್ತಿ ಅಂದರೆ ಅದರ ಸಿದ್ಧಾಂತಗಳು, ಅವು ಮಾತ್ರ ಎಂದೆಂದಿಗೂ ಬಾಳಬಲ್ಲವು.

''ಕಾಲ ಕಳೆದಂತೆ ಭರತಖಂಡದಲ್ಲಿ ಬುದ್ಧನ ಅನುಯಾಯಿ ಗಳು ಬುದ್ಧನ ಬೋಧನೆಯ ನಿಷೇಧದ ಭಾಗವನ್ನು ಮಾತ್ರ ಒತ್ತಿ ಹೇಳತೊಡಗಿದರು. ಇದೇ ಬೌದ್ಧಧರ್ಮದ ಅವನತಿಗೆ ಕಾರಣ ವಾಯಿತು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೭, ಪು.೪೯)*

ಐತಿಹಾಸಿಕ ಏರುಪೇರುಗಳೇನೇ ಇರಲಿ, ಜಗತ್ತಿನ ಇತಿಹಾಸ ದಲ್ಲಿ ಬುದ್ಧನಂತಹ ಮಹಾತ್ಮ ಉದಯಿಸಿ ಬಂದುದೇ ಮಹಾ ಭಾಗ್ಯವೆನ್ನಬೇಕು. ಬುದ್ಧಿ, ಹೃದಯಗಳ ಅಪೂರ್ವ ಸಮನ್ವಯ ಬುದ್ಧನಷ್ಟು ಪೂರ್ಣಪ್ರಮಾಣದಲ್ಲಿ ಅಭಿವ್ಯಕ್ತಗೊಂಡವರು ಅತ್ಯಂತ ವಿರಳ. ಅವನ ಜೀವನ ಎಷ್ಟು ಪ್ರಖರ ಹಾಗೂ ಉದಾ ತ್ತವೋ, ಅದೇ ರೀತಿ, ಅವನು ತೋರಿಸಿಕೊಟ್ಟ ಜೀವನ ವಿಧಾನವೂ ಅತ್ಯಂತ ಶ್ರೇಷ್ಠವಾದುದು. ಸತ್ಯವನ್ನು ಉಳಿದೆಲ್ಲ ಸಂಗತಿಗಳಿ ಗಿಂತಲೂ ಹೆಚ್ಚಿನದಾಗಿ ಭಾವಿಸುವ, ಅದನ್ನು ಕಾಣಲು ಹೋರಾ ಡುವ, ಕಂಡ ಬಳಿಕ ಅದನ್ನೇ ಆರಾಧಿಸುವ ಬುದ್ಧನ ಮಾರ್ಗ ಜನ ಸಾಮಾನ್ಯರಿಗೆ ಎಷ್ಟು ಆದರಣೀಯವಾಯಿತೋ, ಪಂಡಿತ-ಜ್ಞಾನಿ-ವಿಜ್ಞಾನಿಗಳಿಗೂ ಅಷ್ಟೇ ಆಪ್ಯಾಯಮಾನವಾಯಿತು. ಜೀವನದಲ್ಲಿ ಇಂಥ ಒಂದು ಆದರ್ಶವನ್ನು ಪ್ರತಿಪಾದಿಸಿದ ಬುದ್ಧ, ಜಗತ್ತು ಇರುವ ತನಕವೂ ಪ್ರಸ್ತುತವೆನಿಸುತ್ತಾನೆ. 

# ಸಂಸಾರದಲ್ಲಿ ಭಕ್ತಿ



❁ ಕಾಮಕಾಂಚನವೇ ಸಂಸಾರ. ಇದರ ಹೆಸರೇ ಮಾಯೆ ಎನ್ನುವುದು. ಅದು ಭಗವಂತನ ದರ್ಶನ ಪಡೆಯಲು, ಆತನ ಚಿಂತನೆ ಮಾಡಲು ಬಿಟ್ಟು ಕೊಡಲೊಲ್ಲದು. ಒಂದೆರಡು ಮಕ್ಕಳಾದ ನಂತರ ಹೆಂಡತಿಯೊಡನೆ ಅಣ್ಣತಂಗಿಯರ ಹಾಗೆ ವಾಸಿಸಬೇಕು. ಮತ್ತು ಆಕೆಯೊಡನೆ ಸರ್ವದಾ ಭಗವಂತನ ವಿಷಯವನ್ನೇ ಮಾತನಾಡಬೇಕು. ಹಾಗೆ ಮಾಡುವುದಾದರೆ ಇಬ್ಬರ ಮನಸ್ಸೂ ಆತನ ಕಡೆ ಹರಿಯುತ್ತದೆ. ಹೆಂಡತಿ ಭಗವಂತನ ಸಾಕ್ಷಾತ್ಕಾರ ಪಡೆಯಲು ಸಹಾಯಕಳಾಗುತ್ತಾಳೆ. ಪಶುಭಾವ ನಾಶವಾಗದ ಹೊರತು ಭಗವಂತನ ಆನಂದದ ಸವಿಯನ್ನು ಸವಿಯಲಾಗುವುದಿಲ್ಲ. ಪಶುಭಾವ ಹೃದಯವನ್ನು ಬಿಟ್ಟು ತೊಲಗಿ ಹೋಗುವಂತೆ ಭಗವಂತನಿಗೆ ಪ್ರಾರ್ಥನೆ ಮಾಡಬೇಕು; ವ್ಯಾಕುಲಚಿತ್ತದಿಂದ ಪ್ರಾರ್ಥನೆ ಮಾಡಬೇಕು. ಆತ ಅಂತರ್ಯಾಮಿ, ನಾವು ಹೃತ್ಪೂರ್ವಕವಾಗಿ ಪ್ರಾರ್ಥನೆ ಮಾಡಿದ್ದೇ ಆದರೆ ಆತ ಕೇಳಿಯೇ ಕೇಳುತ್ತಾನೆ.

❁ ಸಂಸಾರಿ ನಿಜವಾದ ಭಕ್ತನಾದರೆ ಆತ ಅನಾಸಕ್ತನಾಗಿ ತನ್ನ ಕೆಲಸಕಾರ್ಯಗಳನ್ನು ಮಾಡುತ್ತಾನೆ. ತನ್ನ ಕರ್ಮದ ಫಲ ಲಾಭದಾಯಕವಾಗಿದ್ದರೂ ಸರಿಯೆ, ನಷ್ಟದಾಯಕವಾಗಿದ್ದರೂ ಸರಿಯೆ, ಸುಖದಾಯಕವಾಗಿದ್ದರೂ ಸರಿಯೆ, ದುಃಖದಾಯಕವಾಗಿದ್ದರೂ ಸರಿಯೆ ಎಲ್ಲವನ್ನು ಭಗವಂತನಿಗೆ ಅರ್ಪಿಸಿಬಿಡುತ್ತಾನೆ. ಹಗಲಿರುಳು ಭಕ್ತಿಗಾಗಿ ಪ್ರಾರ್ಥನೆ ಮಾಡುತ್ತಾನೆ, ಮತ್ತೆ ಬೇರೆ ಯಾವುದಕ್ಕೂ ಪ್ರಾರ್ಥನೆ ಮಾಡುವುದಿಲ್ಲ. ಇದಕ್ಕೆ **ನಿಷ್ಕಾಮಕರ್ಮ** ಅಂತ ಹೆಸರು. ಅಂದರೆ ಅನಾಸಕ್ತಿಯಿಂದ ಕೆಲಸ ಮಾಡುವುದು. ಸಂನ್ಯಾಸಿಯೂ ಎಲ್ಲಾ ಕೆಲಸಗಳನ್ನು ನಿಷ್ಕಾಮ ಭಾವನೆಯಿಂದ ಮಾಡಬೇಕು; ಆದರೆ ಆತ ಸಂಸಾರಿಗಳ ಹಾಗೆ ಪ್ರಾಪಂಚಿಕ ಕರ್ಮಗಳನ್ನು ಮಾಡಬೇಕಾಗಿರುವುದಿಲ್ಲ.

❁ ಸಂಸಾರಿ ನಿಷ್ಕಾಮ ಭಾವನೆಯಿಂದ ಯಾರಿಗಾದರೂ ದಾನ ಮಾಡಿದರೆ ಅದು ತನ್ನ ಉಪಕಾರಕ್ಕಾಗಿಯೇ ವಿನಾ ಪರರ ಉಪಕಾರಕ್ಕಲ್ಲ. ಸರ್ವಭೂತಗಳಲ್ಲಿಯೂ ಭಗವಂತನು ಇರುವುದರಿಂದ ಆತನ ಸೇವೆ ಮಾಡಿದಂತೆಯೇ ಆಗುತ್ತದೆ. ಹರಿಯ ಸೇವೆ ಮಾಡಿದರೆ ಅದು ತನಗೇ ಉಪಕಾರ ಮಾಡಿಕೊಂಡಂತಾಗುವುದೇ ವಿನಾ ಪರರಿಗಲ್ಲ. ಸರ್ವಭೂತಗಳಲ್ಲಿಯೂ— ಬರೀ ಮನುಷ್ಯನಲ್ಲೇ ಅಲ್ಲ, ಎಲ್ಲಾ ಜೀವಜಂತುಗಳಲ್ಲಿಯೂ ಹರಿಯ ಸೇವೆ ಯಾರೇ ಆಗಲಿ ಮಾಡಿದರೆ, ಮತ್ತು ಆತನಿಗೆ ಹೆಸರು ಬೇಕಾಗದೆ, ಕೀರ್ತಿ ಬೇಕಾಗದೆ, ಸತ್ತ ಬಳಿಕ ಸ್ವರ್ಗಕ್ಕೆ ಹೋಗಬೇಕು ಎಂಬ ಇಚ್ಛೆ ಇಲ್ಲದೆ ಇದ್ದರೆ, ಯಾರಿಗೆ ಸೇವೆ ಮಾಡುತ್ತಿದ್ದಾನೊ ಅವರಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಇದ್ದರೆ ಮತ್ತು ಇವೇ ಮೊದಲಾದ ರೀತಿಯಾಗಿ ಸೇವೆ ಮಾಡಿದರೆ, ಆತ ಯಥಾರ್ಥ ನಿಷ್ಕಾಮ ಕರ್ಮವನ್ನು, ಅನಾಸಕ್ತ ಕರ್ಮವನ್ನು ಮಾಡಿದಂತೆ ಆಗುತ್ತದೆ. ಕರ್ಮಯೋಗ ಅನ್ನುವುದು ಇದೇ. ಈ ಕರ್ಮಯೋಗ ಭಗವಂತನನ್ನು ಪಡೆಯುವುದಕ್ಕೆ ಒಂದು ಮಾರ್ಗ. ಆದರೆ ಬಹಳ ಕಠಿನವಾದದ್ದು.

❁ ಸಂಸಾರಾಸಕ್ತಿಯನ್ನು ನಿರ್ಮೂಲ ಮಾಡುವುದಕ್ಕೆ ಸಾಧನೆ ಭಜನೆಯನ್ನು ಮಾಡುವುದು. ಭಗವಂತನ ಚಿಂತನೆ ಹೆಚ್ಚುಹೆಚ್ಚಿದಂತೆಲ್ಲ ಸಂಸಾರದ ಸಾಮಾನ್ಯ ವಸ್ತುಗಳ ಭೋಗಾಸಕ್ತಿ ಕಡಿಮೆ ಕಡಿಮೆಯಾಗುತ್ತಾ ಬರುತ್ತದೆ. ಆತನ ಪಾದಪದ್ಮಗಳ ಕಡೆ ಭಕ್ತಿ ಎಷ್ಟು ಪ್ರಮಾಣದಲ್ಲಿ ಬೆಳೆಯುವುದೋ ಅಷ್ಟೇ ಪ್ರಮಾಣದಲ್ಲಿ ವಿಷಯಾಸಕ್ತಿ ಕಡಿಮೆ ಕಡಿಮೆಯಾಗುತ್ತಾ ಬರುತ್ತದೆ. ಅಷ್ಟೇ ಪ್ರಮಾಣದಲ್ಲಿ ದೇಹಸುಖದ ಕಡೆ ಹಾತೊರೆಯುವುದು ಕಡಿಮೆ ಕಡಿಮೆಯಾಗುತ್ತಾ ಬರುತ್ತದೆ. ಪರಸ್ತ್ರೀ ತಾಯಿಯೇ ಎಂಬ ಬೋಧೆಯಾಗುತ್ತದೆ. ಸ್ವಪತ್ನಿ ಅಧ್ಯಾತ್ಮಜೀವನದ ಸಹಾಯಕಿ ಎಂಬ ಬೋಧೆಯಾಗುತ್ತದೆ. ಪಶುಪ್ರವೃತ್ತಿ ಹೊರಟುಹೋಗುತ್ತದೆ. ದೇವಭಾವ ಬಂದುಬಿಡುತ್ತದೆ. ಸಂಸಾರಾಸಕ್ತಿ ಒಮ್ಮೆಗೆಯೆ ಬಿಟ್ಟು ತೊಲಗಿ ಹೋಗುತ್ತದೆ. ಆಗ ನೀನು ಸಂಸಾರದಲ್ಲಿ ಇದ್ದರೂ ಜೀವನ್ಮುಕ್ತನಾಗಿ ಓಡಾಡಿಕೊಂಡು ಇರುತ್ತೀಯೆ.

❁ ಸಂಸಾರಿಗಳು ಕೇಳುತ್ತಾರೆ, 'ಕಾಮಕಾಂಚನದ ಆಸಕ್ತಿ ಏಕೆ ಹೋಗುವುದಿಲ್ಲ?' ಆತನ ಸಾಕ್ಷಾತ್ಕಾರ ದೊರೆತರೆ ಅದು ಹೋಗುತ್ತದೆ. ಒಮ್ಮೆ ಏನಾದರೂ ಬ್ರಹ್ಮಾನಂದ ದೊರೆತುದೇ ಆದರೆ ಇಂದ್ರಿಯ ಸುಖಗಳನ್ನು ಭೋಗಿಸಲಿಕ್ಕೇ ಆಗಲಿ ಅಥವಾ ಹೆಸರು ಕೀರ್ತಿ ಐಶ್ವರ್ಯಗಳನ್ನು ಪಡೆಯುವುದಕ್ಕೇ ಆಗಲಿ ಮನಸ್ಸು ಓಡಿಹೋಗದು. ದೀಪದ ಚಿಟ್ಟೆ ಒಮ್ಮೆ ಬೆಳಕನ್ನು ಕಂಡಿತು ಅಂದರೆ ಅದು ಎಂದಿಗೂ ಕತ್ತಲೆ ಕಡೆ ಹಾರಿಹೋಗುವುದಿಲ್ಲ. ಸಂಸಾರವನ್ನು ಒಮ್ಮೆಗೆಯೆ ತ್ಯಾಗಮಾಡಿಬಿಡುವುದರ ಆವಶ್ಯಕತೆಯೇನಿದೆ? ಆಸಕ್ತಿ ಹೋಯಿತು ಅಂದರೆ ಮುಗಿಯಿತು. ಆದರೆ ಸಾಧನೆ ಆವಶ್ಯಕ; ಇಂದ್ರಿಯಗಳೊಡನೆ ಯುದ್ಧ ಮಾಡಲೇಬೇಕು.

❁ ಕೋಟೆಯೊಳಗಿನಿಂದ ಯುದ್ಧ ಮಾಡುವುದರಲ್ಲಿ ಹೆಚ್ಚು ಅನುಕೂಲ; ಕೋಟೆ ಬಹಳವಾಗಿ ಸಹಾಯ ನೀಡುತ್ತದೆ. ಸಂಸಾರ ಭೋಗಾಲಯ; ಒಂದೊಂದನ್ನಾಗಿ ಅನುಭೋಗಿಸಿ ಅವನ್ನು ಒಡನೆಯೇ ತ್ಯಜಿಸಿಬಿಡಬೇಕು.

ಶ್ರೀರಾಮಕೃಷ್ಣ ವಚನವೇದದಿಂದ

# ನಿವೇದಿತಾ ಕಂಡಂತೆ ಭಾರತೀಯ ಶಿಕ್ಷಣ

**(ನಿವೇದಿತಾ ಅವರ Footfalls of Indian History ಪುಸ್ತಕದ 'The Old Brahminical Learning' ಲೇಖನದ ಸಂಗ್ರಹ)**

ಆಂಗ್ಲ ಮೂಲ: **ಸೋದರಿ ನಿವೇದಿತಾ**

ಸಂಗ್ರಹ ಮತ್ತು ಅನುವಾದ : **ಡಾ. ಹೆಚ್. ಪಾಂಡುರಂಗ ವಿಠಲ**



ಸ್ವಾಮಿ ವಿವೇಕಾನಂದರ ಪ್ರಿಯ ಶಿಷ್ಯೆ, ನವಭಾರತದ ಸ್ಫೂರ್ತಿಯ ಕಿಡಿ, ಅಗಾಧ ಚೈತನ್ಯದ ಆಗರ ಸೋದರಿ ನಿವೇದಿತಾ ತನ್ನ ಸರ್ವಸ್ವವನ್ನೂ ಭಾರತದೇಶಕ್ಕೆ ಸಮರ್ಪಿಸಿಕೊಂಡಳು. ಶೈಕ್ಷಣಿಕ ತರಬೇತಿ, ಅಧ್ಯಾಪನದ ಅನುಭವಗಳನ್ನು ಭಾರತಕ್ಕೆ ಬರುವ ಮೊದಲೇ ಪಡೆದಿದ್ದ ಆಕೆ, ಭಾರತದ ಭವಿಷ್ಯಕ್ಕೆ ಅಗತ್ಯವಾದ ಶಿಕ್ಷಣವೆಂಥದು ಎಂಬುದನ್ನು ಆಳವಾಗಿ ಚಿಂತಿಸಿದ್ದಳು. ಸ್ವಾಮೀಜಿ ವಿಚಾರಧಾರೆ ಹಾಗೂ ಪಾಶ್ಚಾತ್ಯ ಚಿಂತನೆಗಳೊಂದಿಗೆ ಭಾರತದ ಪಾರಂಪರಿಕ ಶಿಕ್ಷಣ ಕ್ರಮವನ್ನೂ ಎರಕಹೊಯ್ದು, ಒಂದು ಹೊಸ ಶಿಕ್ಷಣ ಕ್ರಮವನ್ನು ರೂಪಿಸುವ ಆಶಯವನ್ನು ಹೊಂದಿದ್ದಳು ನಿವೇದಿತಾ. ಈ ಎಲ್ಲ ವಿಚಾರಗಳನ್ನು ವ್ಯಕ್ತಗೊಳಿಸುವ ಈ ಲೇಖನವನ್ನು ಇಲ್ಲಿ ಸಂಗ್ರಹಾನುವಾದ ಮಾಡಲಾಗಿದೆ. ಅನುವಾದಕರು ಕನ್ನಡ ಪ್ರಾಧ್ಯಾಪಕರು ಹಾಗೂ ಮೈಸೂರು ಆಶ್ರಮದ ಭಕ್ತರು.

ಮಧ್ಯಯುಗೀನ ಭಾರತವು ರಾಜಕೀಯವಾಗಿ ಪ್ರಮುಖವಾಗಿದ್ದ ನಗರಗಳನ್ನು ಕೇಂದ್ರವಾಗಿ ಹೊಂದಿರದೆ, ವಿಶ್ವವಿದ್ಯಾಲಯಗಳನ್ನು ಕೇಂದ್ರವಾಗಿ ಹೊಂದಿತ್ತು. ರಾಜಧಾನಿಗಳಾಗಿದ್ದ ಗೌರ್ ಹಾಗೂ ರಂಗ್‌ಪುರ ಕ್ರಮೇಣ ಕ್ಷೀಣದೆಸೆ ಹೊಂದಿದರೂ, ಬಂಗಾಳದ ಜನಜೀವನದಲ್ಲಿ ವಿಕ್ರಮಪುರ, ನದಿಯಾ, ಮಿಥಿಲಾಗಳ ಪ್ರಸಿದ್ಧಿಗೆ ಕುಂದು ಬರಲಿಲ್ಲ. ಢಾಕಾ, ಮುರ್ಶಿದಾಬಾದ್‌ಗಳು ಮುಸ್ಲಿಂ ರಾಜರುಗಳ ಆರ್ಥಿಕ, ಆಡಳಿತ ಕೇಂದ್ರಗಳಾಗಿದ್ದರೂ, ಆ ರಾಜ್ಯಗಳ ಜನರು ಬೌದ್ಧಿಕ ಆಧ್ಯಾತ್ಮಿಕ ಮೂಲಗಳಿಗಾಗಿ ಸಂಸ್ಕೃತ ವಿದ್ಯಾಕೇಂದ್ರಗಳತ್ತಲೇ ದೃಷ್ಟಿ ಹರಿಸುತ್ತಿದ್ದರು. ಮಹಮ್ಮದೀಯರು ತಮ್ಮ ವಿದ್ಯಾಕೇಂದ್ರಗಳನ್ನು ಬೌದ್ಧ ಆಧ್ಯಾತ್ಮಿಕ ಕೇಂದ್ರಗಳ ಸುತ್ತ ನಿರ್ಮಿಸಿಕೊಂಡು, ಅಲ್ಲಿದ್ದ ಬೌದ್ಧಿಕ ವಿದ್ವತ್ ಪರಂಪರೆಯ ಪ್ರಭಾವವನ್ನು ಬಳಸಿಕೊಂಡರು.

ಹೀಗೆ ಇಸ್ಲಾಮೀ ಅಧ್ಯಾತ್ಮ ಕೇಂದ್ರವಾಗಿ ವಿಕ್ರಮಪುರದ ಹತ್ತಿರದ ಜೌನ್‌ಪುರ ಇಂದೂ ಪ್ರಖ್ಯಾತವಾಗಿದೆ. ವಿಕ್ರಮಪುರದ ಸಂಸ್ಕೃತ ವಿದ್ಯೆಗೆ ಪರ್ಷಿಯನ್ನಿನ ಸ್ವಲ್ಪ ಜ್ಞಾನ ಸೇರಿಕೊಂಡಿತು! ವೃದ್ಧ ಮೌಲ್ವಿಗಳಿಗೆ ಸಂಸ್ಕೃತದ ಅಗಾಧ ಸಾಹಿತ್ಯದ ಬಗೆಗೆ ಗೌರವ. ಎರಡೂ ಸಂಸ್ಕೃತಿಗಳ ವಿದ್ವಾಂಸರುಗಳು ಕಾವ್ಯಾರಾಧನೆ ಹಾಗೂ ಬಡತನವನ್ನು ಸ್ವಇಚ್ಛೆಯಿಂದ ಅಪ್ಪಿಕೊಳ್ಳುವ ಮಧ್ಯಯುಗೀನ ಸಂಸ್ಕೃತಿಯನ್ನು ಮೆಚ್ಚಿದವರು; ಒಂದೇ ಪಠ್ಯವನ್ನು ವರ್ಷಗಟ್ಟಲೆ ಬೇಸರವಿಲ್ಲದೆ ಆಳವಾಗಿ ಅಧ್ಯಯನ ಮಾಡುವವರು. ಕಾವ್ಯದ ಮೂಳೆಯ ಆಳದವರೆಗೆ ಅವರ ಹೃದಯ ಹೋಗುವುದು. ಅಭಿರುಚಿಯುಳ್ಳ ವಿದ್ಯಾರ್ಥಿಗಳ ಒಂದು ಜನಾಂಗವನ್ನೇ ಅವರು ನಿರ್ಮಾಣ ಮಾಡಿರುವರು. ತಮ್ಮ ಬಾಲ್ಯದಲ್ಲಿ ಜೌನ್‌ಪುರದ ಮುದಿ ವಿದ್ವಾಂಸನಿಂದ ಪರ್ಷಿಯನ್ ಕಲಿತಿದ್ದ ಸಂನ್ಯಾಸಿಯೊಬ್ಬರ ಸಾಹಿತ್ಯ ಸಂವೇದನೆಯನ್ನು ಇನ್ನಾರಲ್ಲೂ ನಾನು ಕಂಡಿಲ್ಲ. ಕಾಶಿ, ಪಾಟ್ನಾ, ಲಕ್ನೋದಲ್ಲಿನ ಇಂತಹ ಹಿರಿಯ ತಲೆಗಳು ಮಾಯವಾದ ಮೇಲೆ, ಅವರ ಸ್ಥಾನವನ್ನು ಆಕ್ರಮಿಸುವ ಅವರ ಮಕ್ಕಳು ತಾವು ಹೊಸ ಜನಾಂಗ ಎಂಬುದನ್ನು ನಿರೂಪಿಸುತ್ತಾರೆ.

ಪ್ರಾಚೀನ ವಿಶ್ವವಿದ್ಯಾಲಯಗಳು ಒಂದೊಂದೂ ತಮ್ಮ ವಿಶಿಷ್ಟತೆಯಿಂದ ಗುರುತಿಸಲ್ಪಡುತ್ತಿದ್ದುವು. ಹೀಗೆ ದಕ್ಷಿಣ ಭಾರತ

ವೇದಪಠನಕ್ಕೆ ಹೆಸರಾಗಿತ್ತು. ಕಾಂಚಿಯಲ್ಲಿ ಪ್ರತಿ ಮುಂಜಾವು ಎಳೆಯ ಕಂಠಗಳಿಂದ ನಿನದಿತವಾಗುವ ವೇದಪಠನ ಕೇಳಿದವರಿಗೆ ತಾವು ಪ್ರಾಚೀನ ಈಜಿಪ್ಟಿನಲ್ಲಿದ್ದ ಭಾವ ಹುಟ್ಟುತ್ತದೆ. ಇಂಥ ಅಧ್ಯಯನಕ್ಕೆ ಬೇಕಾದ ಏಕಾಗ್ರತೆಯ ವಾತಾವರಣವನ್ನು ಅಲ್ಲಿನ ಸಮಾಜ ನಿರ್ಮಿಸುತ್ತದೆ. ನಿರಕ್ಷರಿಯೂ ಕೂಡ ಋಕ್ಕಿನ ಪಠನ ದಲ್ಲಿ ಅಕ್ಷರ, ಸ್ವರ ತಪ್ಪಾದಾಗ ತೀಕ್ಷ್ಣ ತಿರಸ್ಕಾರವನ್ನು, ತನ್ನ ನೋವನ್ನು ವ್ಯಕ್ತಪಡಿಸಬಲ್ಲ. ನಾಗರಿಕವಲ್ಲದಿದ್ದರೂ, ಇಂತಹ ಪರಿಸರ ಪಠನಕ್ಕೆ ನಿಖರತೆಯನ್ನೂ, ಸ್ಪಷ್ಟ ಉಚ್ಚಾರದ ಎಚ್ಚರವನ್ನೂ ತರಬಲ್ಲುದು. ಇದೇ ರೀತಿ ಬಂಗಾಳದ ನದಿಯಾ ತರ್ಕಕ್ಕೂ, ಕಾಶಿಯು ವ್ಯಾಕರಣ ತತ್ತ್ವಶಾಸ್ತ್ರ ಶಾಸ್ತ್ರಗ್ರಂಥಗಳ ಪಾಂಡಿತ್ಯಕ್ಕೂ ಹೆಸರಾಗಿತ್ತು.

ಇದಲ್ಲದೆ ವಿವಿಧ ವಿಷಯಗಳ ಅನೇಕ ಗ್ರಂಥಗಳ ತೌಲನಿಕ ಅಧ್ಯಯನ ಮಾಡುವ ಪಂಡಿತರಿರುವ ಗ್ರಂಥಾಲಯ ಕೇಂದ್ರಗಳು, ಇನ್ನು ಹಲವೆಡೆ ವೇದಪಾಠವನ್ನು ಹೃದ್ಗತ ಮಾಡಿಕೊಳ್ಳುತ್ತಿರುವ ವಿದ್ಯಾರ್ಥಿಗಳು ಇರುವರು. ಎಲ್ಲವನ್ನೂ ಬಿಟ್ಟು ಸತ್ಯವನ್ನೇ ಅನ್ವೇಷಿಸುವವರಿಗಾಗಿ ಸಂತೋಷದಿಂದ ತಾವು ಕಂಡು ಅನುಭವಿಸಿದ ಪ್ರಾಚೀನ ಸತ್ಯಗಳನ್ನು ಧಾರೆಯೆರೆಯಲು ದುರ್ಗಮವಾದ ಪುಟ್ಟ ಹಳ್ಳಿಗಳಲ್ಲಿ ವಿವೇಕಿಗಳಾದ ಗಂಭೀರ ಪಂಡಿತರು ಇರುವರು. ಇನ್ನೂ ಬಡ ವಿದ್ವಾಂಸರುಗಳು ಭಾರತದ ಎಲ್ಲೆಡೆಗಳಿಂದ ಅವರನ್ನು ಹುಡುಕಿ ಬರುವರು. ಇನ್ನೂ ಬೆಳಗಿನ ಜಾವ ಚಳಿಗಾಲದಲ್ಲಿ ಮೂಲೆಯೊಂದರಲ್ಲಿ ತನ್ನಷ್ಟಕ್ಕೆ ತಾನು ಗಟ್ಟಿಯಾಗಿ ಗ್ರಂಥ ಪಠನ ಮಾಡುತ್ತಿರುವನು. ಅವನು ಪಂಡಿತನೆನ್ನಿಸಿಕೊಂಡು ಹೊರ ಪ್ರಪಂಚಕ್ಕೆ ಬರಲು ಕನಿಷ್ಠ ಹನ್ನೆರಡು ವರ್ಷ ಅಧ್ಯಯನ ಮಾಡಬೇಕು. ಆಗ ಆತ ಆ ವಿಷಯವನ್ನು ಆಮೂಲಾಗ್ರವಾಗಿ ತನ್ನೊಳಗೆ ಕಂಡುಕೊಂಡಿರುವುದಲ್ಲದೆ, ಸೋಮಾರಿತನ ಮತ್ತು ಸುಖಭೋಗಗಳ ಆಮಿಷ ಅವನನ್ನು ಆಕರ್ಷಿಸಲಾರವು.

ಅಂದು ಬರಿಗೈಯಲ್ಲಿ ಬಂದ ವಿದ್ಯಾರ್ಥಿಯನ್ನು ಯಾವ ಪ್ರತಿಫಲಾಪೇಕ್ಷೆಯಿಲ್ಲದೆ ತಮ್ಮ ಮಕ್ಕಳ ಜೊತೆಗೇ ಸಲಹಿ ವಿದ್ಯಾದಾನ ಮಾಡುತ್ತಿದ್ದ ಪುಟ್ಟ ಗ್ರಾಮಗಳಲ್ಲಿನ ತೋಲ್‌ಗಳು ಈಗೆಲ್ಲಿ? ಈಚಿನ ವಾಣಿಜ್ಯ ಜಗತ್ತು ಹಿಂದೆ ಅಲ್ಲಿದ್ದ ಆತಂಕರಹಿತ ಜೀವನ, ಅತ್ಯಧಿಕ ವಿರಾಮ ಮಾನವನಿಗೆ ಸಿಗದಂತೆ ಮಾಡಿದೆ. ಎಲ್ಲಕ್ಕೂ ಹಣ ನಿಗದಿಯಾಗಿ, ಈಗ ಹಸಿದ ಬಾಯಿಗಳಿಗೆ ಸಾಲುವಷ್ಟು ಆಹಾರ ಸಿಗುತ್ತಿಲ್ಲ; ಯಾವ ಕುಟುಂಬವೂ ಸಂಪಾದಿಸಬಹುದಾದ ಒಬ್ಬ ಸದಸ್ಯನನ್ನು ಅವನಷ್ಟಕ್ಕೆ ಬಿಡಲಾರದು. ಹಿಂದೆ ವಿದ್ಯೆ ಒಬ್ಬನನ್ನು ಬಡವನನ್ನಾಗಿಸುವುದು ಎಂದು ಯಾರೂ ಯೋಚಿಸುತ್ತಿರಲಿಲ್ಲ; ಮುಂದೆ ಅದು ಅವನನ್ನು ಉನ್ನತಿಗೆ ಒಯ್ಯುತ್ತದೆ ಎಂದು ನಂಬಿದ್ದರು. ಆದರೆ ಅನೇಕ ಋಣಗಳಿಂದಾಗಿ ಆತ ಸಂಪಾದಿಸಿದ್ದೆಲ್ಲವೂ ಸಾಕಾಗದೆ, ಆತ ಬಡವನಾಗಿಯೆ ಉಳಿಯುತ್ತಿದ್ದ. ವಿದ್ಯಾರ್ಥಿಗಳು ತಮ್ಮ ಶ್ರಮವನ್ನು ನೀಡಿದ್ದರೆ ಸಾಕಿತ್ತು. ಗುರು ಜ್ಞಾನ ಭಂಡಾರ ಮಾತ್ರವಲ್ಲ, ವಿದ್ಯಾದಾನ ಮಾಡಲು ಹೇಗೋ ಸಂಪಾದನೆಯನ್ನೂ ಮಾಡುತ್ತಿದ್ದ. ಪ್ರಸಿದ್ಧಿಯ ಮೇಲೆ ಇಂತಹವನ ಬಳಿಯೇ ತರ್ಕ ಕಲಿಯಬೇಕೆಂದು ದೇಶದ ನಾನಾ ಮೂಲೆಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಸಂಸ್ಕೃತದಲ್ಲೇ ಪಾಠ ನಡೆಯುತ್ತಿತ್ತು.

ವಿದ್ಯೆಯನ್ನು ಬೇಡಿ ಬಂದ ವಿದ್ಯಾರ್ಥಿ ಆಗಲೇ ಆ ವಿಷಯದಲ್ಲಿ ಆಸಕ್ತನಾಗಿದ್ದು, ವಿಶೇಷವಾದುದನ್ನು ಕಲಿಯಲು ಬಂದವನೆಂದು ತಿಳಿಯುತ್ತಿತ್ತು. ಅವನಿಗೆ ಅಧ್ಯಯನ ಮಾಡಲು ಪುಸ್ತಕವೊಂದನ್ನು ನೀಡುತ್ತಿದ್ದರು. ಮೊದಲು ಅದನ್ನು ಆತ ಆಳವಾಗಿ ಅಧ್ಯಯನ ಮಾಡಿ, ನೆನಪಿನಲ್ಲಿಡಬೇಕಿತ್ತು. ಬೆಳಗಿನ ಪಠನದಲ್ಲಿ ವಿಷಯ ಪರೀಕ್ಷೆಯೂ ನಡೆದು, ವಿಮರ್ಶೆ ಮಾಡಬೇಕಿತ್ತು. ಸಮಾಧಾನವಾಗದಿದ್ದಲ್ಲಿ, ಅದನ್ನೇ ಪುನಃ ಓದಲು ಹೇಳುತ್ತಿದ್ದರು. ಇತರರ ಪಠನವಾದ ಮೇಲೆ ಗುರುಗಳ ಬಳಿ ತಮ್ಮ ಸಮಸ್ಯೆಗಳನ್ನು ನಿವೇದಿಸಬಹುದಿತ್ತು.

ಅದರ ನಂತರ ಮಧ್ಯಾಹ್ನ ಗುರುಗಳು ಗ್ರಂಥದ ಮುಂದಿನ ಭಾಗವನ್ನು ಓದಿ, ವಿಷಯವನ್ನು ವಿಸ್ತರಿಸುತ್ತಿದ್ದರು. ಗುರುಕುಲ ಶಿಕ್ಷಣ ಪದ್ಧತಿಯ ವೈಭವ ಮತ್ತು ಸಂತೋಷ ತೋರುತ್ತಿದ್ದುದು ದಿನದ ಕೆಲಸ ಮುಗಿದು ಸಾಯಂಕಾಲದ ನೆರಳು ಉದ್ದವಾದಾಗ. ಗುರು ಹಾಗೂ ವಿದ್ಯಾರ್ಥಿಗಳು ವಾಕಿಂಗ್ ಹೊರಡುವರು. ಗದ್ದೆಗಳ ನಡುವೆ ಹೋಗುವಾಗ ಇಬ್ಬರು ಮೂವರ ಗುಂಪಾಗಿ, ಅಂದು ತಮ್ಮ ಅಧ್ಯಯನದಲ್ಲಿ ಎದುರಾದ ಪ್ರಶ್ನೆಗಳನ್ನು ಚರ್ಚಿಸುವರು. ಮುಂದುವರಿದು, ಇನ್ನೊಂದು ಹಳ್ಳಿಯ ತೋಲ್‌ಗೆ ಭೇಟಿ ನೀಡಬಹುದು ಅಥವಾ ತಮ್ಮ ತೋಲ್‌ಗೆ ಹಿಂದಿರುಗಿ ಚರ್ಚಿಸಲು ಬಂದ ಸಂದರ್ಶಕರನ್ನು ಕಾಣಬಹುದು. ಆಹಾರವನ್ನೂ ಮರೆತು ಚರ್ಚೆ ಮುಂದುವರಿಯುವುದು; ಸಮಾಧಾನ ಸಿಗದಿದ್ದರೆ, ಸಂದರ್ಶಕರು ಅಲ್ಲೇ ಉಳಿದು, ಬೆಳಿಗ್ಗೆ ಮಾತು ಮುಂದುವರಿಸುವರು.

ವಿದ್ಯಾರ್ಥಿಗಳ ಸ್ವಂತಿಕೆ ಹಾಗೂ ಸಾಮರ್ಥ್ಯ ನಿಜವಾಗಿ ಬೆಳೆಯುವುದು ಇಂತಹ ನಿರಂತರ ಚರ್ಚೆಗಳಿಂದಲೇ. ಅಲ್ಲದೆ ತೋಲ್‌ಗಳು ಜಿಲ್ಲೆಯೊಂದರಲ್ಲಿ ಪಕ್ಕಪಕ್ಕದಲ್ಲೆ ಏಕೆ ಇರಬೇಕು ಎಂಬುದನ್ನೂ ಇದು ಮನಗಾಣಿಸುತ್ತದೆ. ಕೆಲವು ಬಾರಿ ವಾದ ಬೆಳೆದು, ಯಾವ ಯುದ್ಧಕ್ಕೂ ಕಡಿಮೆಯಿಲ್ಲದ ಉದ್ರೇಕವನ್ನು ತರುತ್ತದೆ. ಪಂಡಿತನೊಬ್ಬ ಆಗ ನದಿಯಾದಲ್ಲಿ ಸಂಸ್ಕೃತ ವಿದ್ವಾಂಸನಾಗಿದ್ದ ಚೈತನ್ಯನನ್ನು ಸೋಲಿಸಲೆಂದೇ ಕಾಶಿಯಿಂದ ಬಂದಿದ್ದ ಕಥೆ ಇದೆ. ಚರ್ಚೆ ಕ್ರಮೇಣ ನದಿಯಾ ಮತ್ತು ಕಾಶಿಗಳ ಮೇಲ್ಮೆಯ ಪಣ ಹೊಂದಿತು. ಕೇಳುಗರು ಸಹಜವಾಗಿ ತಮ್ಮ ಪ್ರದೇಶದ ಪರ. ಆದರೆ ನೋಡುಗರಿಗೆ ಅಲ್ಲಿಗೆ ಬಂದಿದ್ದ ಪಂಡಿತನ ಹಿರಿ ವಯಸ್ಸು ತೇಜಸ್ಸಿನಿಂದ ಅವನ ಜೊತೆ ಎಳೆಯ ಚೈತನ್ಯ ವಾದಕ್ಕಿಳಿದುದೇ ಹುಚ್ಚು ಸಾಹಸ ಎನಿಸಿತು. ವಯಸ್ಸಾದವರು ಪಂಡಿತನ ಪರ – ಎಳೆಯರು ವಿರೋಧಿಗಳಾಗಿ, ಸಮಸಮರಾಗಿದ್ದರು. ಎಷ್ಟೇ ಉದ್ವೇಗವಾದರೂ, ಯಾರೂ ಮಧ್ಯೆ ಪ್ರವೇಶಿಸಲಿಲ್ಲ. ಚರ್ಚೆ ಸತ್ಯದರ್ಶನ

ಕ್ಕಾಗಿ, ವ್ಯಕ್ತಿಗಳಿಗಾಗಿ ಅಲ್ಲ. ಹೀಗೆ ತಿರಸ್ಕಾರಕ್ಕೆ ಎಡೆ ನೀಡದೆ ಚರ್ಚೆ ಮುಂದುವರಿಯಿತು. ಎಳೆಯನ ಮೇಲಿನ ಕನಿಕರದಿಂದ ಪಂಡಿತ ಸಾವಧಾನವಾಗಿ ಕೈಗೆ ಕೈಚೀಲ ಹಾಕಿಕೊಂಡಂತೆ ಮುಂದುವರಿದ. ಚಿಕ್ಕವನಾದ ಚೈತನ್ಯ ವೃದ್ಧ ಪಂಡಿತನಿಗೆ ವಿನಯ ತೋರಿ ವಾದದಲ್ಲಿ ಸೋಲಬಹುದಿತ್ತೆಂದು ನಮಗೆ ಅನ್ನಿಸಬಹುದು. ಆದರೆ ವಾದವು ಸತ್ಯಪ್ರೇಮಿಯೇ ಹೊರತು, ವ್ಯಕ್ತಿ ಪ್ರೇಮಿಯಲ್ಲ!

ಉನ್ನತ ಶಿಕ್ಷಣವು ಸಾಮಾನ್ಯರ ಸಮಾಜದೊಂದಿಗೆ ಕೆಲವು ಅಂಶಗಳಲ್ಲಿ ಸಂಬಂಧ ಹೊಂದಿದ್ದಿತು. ವಿದ್ಯೆಯ ಬೆನ್ನುಹತ್ತಿ ಹೋದವರು ಸಹಜವಾಗಿಯೇ ಅನ್ನ ಸಂಪಾದಿಸಲಾಗದೆ ಹಸಿವಿನಿಂದ ನರಳುವರು. ಯುದ್ಧದ ಸೈನಿಕರನ್ನು ಪೊರೆದಂತೆ, ಸಮಾಜವೇ ಹಣ ನೀಡಿ ಅವರನ್ನು ಪೊರೆಯಬೇಕು. ಭಾರತದಲ್ಲಿ ವಿದ್ಯೆ ಸಮಾಜದ ಆಭರಣವೆಂಬಂತೆ ಗೌರವ ಹೊಂದಿತ್ತು. ದೊಡ್ಡ ಮನೆಗಳ ಮದುವೆಯ ಸಮಾರಂಭದ ವೈಭವ, ಪಂಡಿತರ ನಡುವಿನ ವಾದ ಸ್ಪರ್ಧೆಯಿಲ್ಲದೆ ಸಂಪೂರ್ಣ ಎನ್ನಿಸುತ್ತಿರಲಿಲ್ಲ. ಸ್ಪರ್ಧಿಸಬಯಸುವ ಅನೇಕ ಶಾಲೆಗಳಿಗೆ ಪ್ರಸಿದ್ಧ ವಿದ್ವಾಂಸನೊಬ್ಬನ ನಿರ್ದೇಶನದಲ್ಲಿ ವಾದಿಸುವಂತೆ ಕರೆ ಹೋಗುತ್ತಿತ್ತು. ವಾದ ನಡೆಯುತ್ತಿದ್ದುದು ಶ್ರೇಷ್ಠರ ಸನ್ನಿಧಿಯಲ್ಲಿ. ಅವರು ತಾವೇ ವಾದದಲ್ಲಿ ಭಾಗವಹಿಸದಿದ್ದರೂ ವಾದದ ವಿಷಯ, ಭಾಷೆ, ವಿಮರ್ಶೆಗಳಲ್ಲಿ ನಿಷ್ಣಾತರಾಗಿದ್ದು ಸರಿಯಾದ ರೀತಿಯಲ್ಲಿ ವಾದ ಮುಂದುವರಿಯುವಂತೆ ನೋಡಿಕೊಳ್ಳುವರು. ಹೀಗೆ ಹಲವು ದಿನ ಅಥವಾ ಹಲವು ಗಂಟೆಗಳು ವಿಜೇತರ ಘೋಷಣೆಯ ತನಕ ವಾದದ ಕುಸ್ತಿ ನಡೆಯುವುದು. ಕೆಲವೊಮ್ಮೆ ವಧುವಿನ ತಂದೆ ಪಣದ ಹಣವನ್ನು ಘೋಷಿಸಿ, ಮುಖ್ಯ ಭಾಗವನ್ನು ವಿಜೇತ ಗುಂಪಿನ ನಾಯಕತ್ವ ವಹಿಸಿದ್ದ ಪಂಡಿತನಿಗೆ ಕೊಡುವನು. ಅಮೋಘ ವಿಜಯಕ್ಕೆ ಇದು ಸನ್ನೆ. ಇದು ಪಣದ ಮುಕ್ಕಾಲು, ಎಂಟನೆ ಐದು, ಕೆಲವೊಮ್ಮೆ ಹದಿನಾರರಲ್ಲಿ ಹದಿನೈದು ಭಾಗ ಆಗಬಹುದು. ವಿಜಯಿ ಕೆಲವೊಮ್ಮೆ ಇದು ಸಾಲದೆಂದೋ, ಗೌರವಕ್ಕೆ ಕಡಿಮೆಯೆಂದೋ ಇದನ್ನು ತ್ಯಜಿಸುವನು. ವಿರೋಧಿಗೆ ಪೂರ್ಣ ಸೋಲಾಗಿ, ಕಾಲೂರಲೂ ಜಾಗವಿಲ್ಲ ಎಂಬ ವಾಸ್ತವಕ್ಕೆ ಈ ಹಂಚಿಕೆ ಹೊಂದದು; ತನಗೇ ಪೂರ್ತಿ ಸಲ್ಲಬೇಕು ಎಂಬುದು ಅವನ ಭಾವ. ಆತ್ಮಗೌರವವುಳ್ಳ ಪಂಡಿತ ಇಡೀ ಜಗತ್ತೇ ತನ್ನ ನಿಬಂಧನೆಗಳ ಸಮೇತ ತನ್ನನ್ನು ಒಪ್ಪಿಕೊಳ್ಳಬೇಕು, ಇಲ್ಲದಿದ್ದರೆ ಏನೂ ಬೇಡ ಎಂದುಕೊಳ್ಳುವನು. ಪಾಶ್ಚಾತ್ಯ ಶೌರ್ಯ ಸ್ಪರ್ಧೆಗಳಲ್ಲೂ ಅಪರಿಚಿತ ವೀರ ಇದ್ದಕ್ಕಿದ್ದಂತೆ ಸ್ಪರ್ಧಿಯಾಗಿ ಬಂದು ಗೆಲ್ಲಬಹುದಾದಂತೆ ಇಲ್ಲಿಯೂ ಅತ್ಯಂತ ಬುದ್ಧಿಶಾಲಿ ಅಪರಿಚಿತ ಪಂಡಿತನೊಬ್ಬ ಪ್ರತ್ಯಕ್ಷನಾಗಿ ಎಲ್ಲರ ಗೆಲುವಿನ ಊಹೆಗಳನ್ನು ತಲೆಕೆಳಗಾಗಿಸಬಲ್ಲ. ಎಲ್ಲ ರೀತಿಯ ಹಳೆ ಹೊಸ ವಿಧಾನಗಳಿಂದ ತನ್ನ ವಾದವನ್ನು ಸಮರ್ಥಿಸಿಕೊಳ್ಳಲು ಪಂಡಿತಶ್ರೇಷ್ಠನು ತಯಾರಾಗಿರಬೇಕು.

ಪಂಡಿತರ ಎದುರಿನ ಇಂತಹ ಸ್ಪರ್ಧೆಗಳಲ್ಲಿನ ತೀವ್ರ ಭಾವೋದ್ವೇಗ ಗಮನಿಸಿದವರಿಗೆ ಕೇವಲ ಪಂಡಿತರು ಅಥವಾ ಸಾಧುಗಳೇ ತಮ್ಮತಮ್ಮಲ್ಲಿ ನಡೆಸುವ ಸಮ್ಮೇಳನಗಳಲ್ಲಿ ಏನಾಗಬಹುದೆಂದು ಊಹಿಸಬಹುದು. ರಾಜರುಗಳು ಅಥವಾ ನಗರಗಳು ಹೆಚ್ಚು ಹಣ ನೀಡಿ ಇಂತಹ ಸಮ್ಮೇಳನಗಳನ್ನು ಪ್ರಚಾರದೊಡನೆ ನಡೆಸುತ್ತಿದ್ದರು. ಭಾಗವಹಿಸಲು ಹೆಸರೇ ಕೇಳಿರದ ತೋಲ್‌ಗಳ, ಅರಮನೆ ಗ್ರಂಥಾಲಯಗಳ, ಪ್ರಸಿದ್ಧ ವಿಶ್ವವಿದ್ಯಾನಿಲಯಗಳ ಪಂಡಿತರು ಬರುತ್ತಿದ್ದರು. ವಾದವೈಖರಿ ಹೇಗಿರುತ್ತಿತ್ತೆಂದರೆ, ಸೋತವನು ತನ್ನ ತೇಜೋವಧೆ ಮತ್ತು ಸಿಟ್ಟಿನಲ್ಲಿ ಪ್ರಾಯೋಪವೇಶ ಮಾಡಿ ಪ್ರಾಣ ಬಿಡುವ ಪ್ರತಿಜ್ಞೆ ಮಾಡಿದ್ದನ್ನು ಕೇಳಿದ್ದೇವೆ. ವಾದ ನಿರಂತರ ವಾಗಿ ಹಲವು ದಿನ ಎಳೆಯುತ್ತಿತ್ತು. ವಿಜಯಘೋಷಣೆ ಆದೊಡನೆ ವಿಜಯಿಯು ಉನ್ಮತ್ತನಾಗಿ ಕುಳಿತ ಚಾಪೆಯನ್ನು ಹರಿದು, ಕೆಳಗಿನ ಮಣ್ಣನ್ನು ಎದುರಿನ ಘನ ಪಂಡಿತರ ತಲೆಯ ಮೇಲೆ ಸುರಿಯುತ್ತಿದ್ದ!

ಇಂತಹ ಪ್ರಸಂಗಗಳಿಂದ ನಮಗೆ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಶಿಕ್ಷಣ ಹೇಗಿದ್ದಿರಬಹುದೆಂಬ ಕಲ್ಪನೆ ಬರುತ್ತದೆ. ವಿದ್ವಾಂಸರಾದ ಸನ್ಯಾಸಿಗಳು, ಬ್ರಾಹ್ಮಣರು ಚರ್ಚೆಗಾಗಿ ಸೇರುವ ಪ್ರಸಿದ್ಧ ಕೇಂದ್ರಗಳಲ್ಲಿ ಋಷಿಕೇಶವೂ ಒಂದು. ಹರಿದ್ವಾರ ಅಹಮದಾಬಾದ್ ನಾಸಿಕಗಳಲ್ಲಿ ಅನುಕ್ರಮವಾಗಿ ನಡೆಯುವ ಕುಂಭ ಮೇಳಗಳಲ್ಲಿ ಪ್ರಾಚೀನಕಾಲದಿಂದಲೂ ಕಲಿಕೆಯ ಉದ್ದೇಶದ ವಿದ್ವಾಂಸರುಗಳ ವಿದ್ವತ್‌ಸಭೆ ನಡೆದುಕೊಂಡು ಬರುತ್ತಿದೆ. ಇಲ್ಲಿ ಭಾಗವಹಿಸುವವರು ನವ ವಿದ್ವಾಂಸರಲ್ಲ, ಪರಸ್ಪರ ತಮ್ಮ ಓರೆಕೋರೆಗಳನ್ನು ತಿದ್ದಿ ಹದಗೊಳಿಸಿಕೊಳ್ಳಲು ಬಂದ ಪಕ್ವಗೊಂಡ ವಿವೇಕಿಗಳು. ಋಷಿಕೇಶದಲ್ಲಿ ವ್ಯಾಸರು ವೇದಗಳನ್ನೆಲ್ಲ ಸಂಗ್ರಹಿಸಿ, ವಿಭಾಗಿಸಿದರೆಂಬ ಐತಿಹ್ಯವನ್ನು ಅಲ್ಲಗಳೆಯಲಾಗದು. ಈ ರೀತಿ ಕರೆದ ಸಭೆಗಳಲ್ಲಿ ನೆರೆದವರು ಒಟ್ಟಾಗಿ ವಿದ್ವತ್ ಕೃತಿಗಳನ್ನು ರಚಿಸಲೂಬಹುದು.

ಸಂಸ್ಕೃತ ವಿದ್ಯಾಭ್ಯಾಸ ಶಾಲೆಗಳು ಮತ್ತು ವಿಶ್ವವಿದ್ಯಾಲಯಗಳು ಎಂಬ ಎರಡು ಹಂತಗಳಿದ್ದವು. ಹೆಚ್ಚಿನ ಸಂಖ್ಯೆಯಲ್ಲಿರುವ ತೋಲ್‌ಗಳದ್ದು ಖಚಿತವೂ, ನಿಖರವೂ ಆದ ವಿದ್ಯಾಭ್ಯಾಸ. ಹತ್ತು ಹದಿನೈದು ವರ್ಷ ಶಿಕ್ಷಣ ಪಡೆದರೂ, ಸತ್ಯಾಂಶಗಳ ಬಗ್ಗೆ ನಿರ್ಣಯದ ಹತ್ತಿರ ಬರುತ್ತಿದ್ದವರು ಕೆಲವರೇ. ಇದಕ್ಕೆ ಹೋಲಿಸಿದರೆ ವಿಶ್ವವಿದ್ಯಾಲಯಗಳ ಶಿಕ್ಷಣ ಮೇಲುಮೇಲಿನದು. ಆದರೆ ವಿದ್ಯೆಯ ಸಾರವಾದ ಸತ್ಯಾರ್ಥ ನಿರ್ಣಯ ಇಲ್ಲಿ ಸುಲಭ. ತನ್ನ ವಾದದ ಆಧಾರವಾಗಿ ತರ್ಕದ ಐದು ಅಂಗಗಳು, ನೀಡಬಹುದಾದ ಬಗೆಬಗೆಯ ಪ್ರಮಾಣಗಳು, ಪ್ರತಿವಾದವನ್ನು ಎದುರಿಸಲು ಕುತರ್ಕ ಮೊದಲಾದವುಗಳ ಅಭ್ಯಾಸ, ತರಬೇತಿಗಳನ್ನು ಪೂರೈಸಿದ ಮೇಲೆ ವಿದ್ಯಾರ್ಥಿಯನ್ನು ತನ್ನದೇ ಆದ ವಿಧಾನದಲ್ಲಿ ತನ್ನ ಜ್ಞಾನವನ್ನು ಬಳಸುವುದಕ್ಕೆ ಬಿಡುತ್ತಿದ್ದರು. ಹೀಗೆ ಆತ ಅರಿವು, ವಿವೇಕಗಳನ್ನು ಅನುಭವಪೂರ್ವಕವಾಗಿ ಗಳಿಸಿಕೊಳ್ಳುತ್ತಿದ್ದ.

ಜ್ಞಾನಮತ್ತು ಸಂಪತ್ತು ಎರಡೂ ಹೇಳಲಾಗದ ಅಸೂಯೆಯಿರುವ, ಆದರೆ ಸ್ನೇಹ ನಟಿಸುವ ಎದುರಾಳಿ ಸಹೋದರಿಯರು. ಒಬ್ಬರನ್ನು ನಿಜವಾಗಿ ಪ್ರೀತಿಸಿದವರು ಇನ್ನೊಬ್ಬರ ಕೃಪೆಯನ್ನು ಗೆಲ್ಲಲಾರರು. ಆದರೂ, ಸೌಜನ್ಯಕ್ಕಾಗಿ ತಮ್ಮ ಸಹೋದರಿಯ ಪೂಜಕನ ಕನಿಷ್ಠ ಆವಶ್ಯಕತೆಯನ್ನು ಪೂರೈಸುವರು. ಹೀಗೆ ಸಾಹುಕಾರ ಶತದಡ್ಡನಾಗಲಾರ; ಜ್ಞಾನಿ ಹಸಿವಿನಿಂದ ಕಂಗೆಡುವಷ್ಟು ಬಡತನಕ್ಕೆ ಈಡಾಗಲಾರ. ಹೀಗಾಗಿ ಏನು ಬೇಕೆಂಬುದನ್ನು ಮೊದಲು ನಿರ್ಧರಿಸಿಕೊಳ್ಳಬೇಕು; ಸಂಪತ್ತಿನ ಸಾಧನವನ್ನಾಗಿ ಜ್ಞಾನವನ್ನು ಬೆಂಬತ್ತಿ ಹೋಗಬಾರದು. ಹಿಂದಿನ ಕಾಲದಲ್ಲಿ ಕಾಣಿಕೆಗಳನ್ನು ವಸ್ತುರೂಪದಲ್ಲಿ ನೀಡುತ್ತಿದ್ದುದರಿಂದ, ವಿದ್ಯಾರ್ಥಿಗಳಿಗೆ ವರ್ಷದಿಂದ ವರ್ಷಕ್ಕೆ ಆಹಾರ ನೀಡುತ್ತಿದ್ದರೂ, ಗುರುಪತ್ನಿಯ ಆಸ್ತಿ ಕೆಲವೇ ಬೆಳ್ಳಿಯ ಆಭರಣಗಳು ಹಾಗೂ ಹಿತ್ತಾಳೆಯ ಅಡುಗೆ ಪಾತ್ರೆಗಳು ಮಾತ್ರ. ಮಾನವತೆಗೆ ನೀಡಲಾಗುತ್ತಿದ್ದ ಉನ್ನತ ಶ್ರಮಕ್ಕೆ ಬದಲಾಗಿ ನಿಜವಾಗಿ ಏನನ್ನೂ ನೀಡುತ್ತಿರಲಿಲ್ಲ. ಹೀಗೆ ಗುರುವಿನಷ್ಟೇ ಗುರುಮನೆಯ ಹೆಂಗೆಳೆಯರೂ ಹೆಚ್ಚಿನ ಉತ್ಸಾಹ ಹೊಂದಿದ್ದರೆ ಮಾತ್ರ ತೋಲ್ ಗುರುಕುಲವನ್ನು ನಡೆಸಲು ಸಾಧ್ಯವಿರುತ್ತಿತ್ತು. ಗುರುಪತ್ನಿ ಅಡುಗೆ, ಮನೆಯನ್ನು ಶುಚಿಯಾಗಿಡುವುದಲ್ಲದೆ ಕಾಯಿಲೆ ಬಿದ್ದವರನ್ನು ನೋಡಿಕೊಳ್ಳಬೇಕಾಗಿತ್ತು. ಶಿಷ್ಯರೆಲ್ಲರೂ ಆಕೆಯನ್ನು ತಮ್ಮ ತಾಯಿಯಂತೆ ಭಾವಿಸುತ್ತ, ಗುರುವಿಗೆ ನೀಡುವಷ್ಟೇ ನಿಜವಾದ ಪ್ರೀತಿಗೌರವಗಳಿಂದ ಕಾಣುತ್ತಿದ್ದರು. ಆಕೆ ವಿಧವೆಯಾದಲ್ಲಿ, ಅವಳ ಜೀವನೋಪಾಯ, ರಕ್ಷಣೆ ವಿದ್ಯಾರ್ಥಿಗಳ ಕರ್ತವ್ಯವಾಗಿರುತ್ತಿತ್ತು. ಆವಶ್ಯಕತೆ ಬಿದ್ದರೆ ಅದಕ್ಕಾಗಿ ಅವರು ಭಿಕ್ಷೆ ಬೇಡುವರು. ಗುರು ಹಾಗೂ ಗುರುಮನೆಯವರ ಜೊತೆಗಿನ ಶಿಷ್ಯನ ಕೌಟುಂಬಿಕ ಬಂಧದ ಬಗೆಗಿನ ಹಲವು ಚಿತ್ರಗಳು ಭಾರತೀಯ ಇತಿಹಾಸದಲ್ಲಿ ಕಂಡುಬರುವುವು. ಶತ್ರುಗಳ ಆಚಾರ್ಯ ಬೃಹಸ್ಪತಿಯ ಬಳಿ ಬಂದು ಸಂಜೀವಿನೀ ವಿದ್ಯೆ ಕಲಿತು, ಅದನ್ನು ಗುರುವಿನ ಮೇಲೆಯೇ ಪ್ರಯೋಗಿಸಿದ ಕಚ ಐದು ವರ್ಷಗಳಾದ ಮೇಲೆ ಗುರುಕುಲದಿಂದ ದೇವಲೋಕಕ್ಕೆ ಹೊರಟ. ಗುರುಪುತ್ರಿ ದೇವಯಾನಿ ಕಚನನ್ನು ತುಂಬ ಹಚ್ಚಿಕೊಂಡಿದ್ದು, ಅಗಲಿಕೆ ಸಹಿಸಲಾರದೆ ತನ್ನನ್ನು ಮದುವೆಯಾಗಿ ಒಟ್ಟಿಗೆ ಕರೆದೊಯ್ಯುವಂತೆ ಬೇಡಿಕೊಂಡಳು. ಗುರುಪುತ್ರಿಯನ್ನು ಸಹೋದರಿಯಂತೆ ಕಾಣುತ್ತಿದ್ದ ಕಚ ಬೇಡಿಕೆಯನ್ನು ನಿರಾಕರಿಸಿದಾಗ ಆತ ಕಲಿತ ವಿದ್ಯೆ ಕೆಲಸಕ್ಕೆ ಬಾರದಂತಾಗಲಿ ಎಂದಾಕೆ ಶಪಿಸಿದಳು. ತನ್ನ ಬಗ್ಗೆ ಶಾಪವನ್ನು ಒಪ್ಪಿದ ಕಚ, ತನ್ನಿಂದ ಆ ವಿದ್ಯೆಯನ್ನು ಕಲಿತವರಲ್ಲಿ ಅದು ಫಲ ನೀಡುವುದೆಂದು ಹೇಳಿದ!

ವೇದಪಠನದ ಸ್ವರಶ್ರೇಣಿ ಹಾಗೂ ಏರಿಳಿತದ ಲಯವನ್ನು ಕಾಶಿಯ ಬ್ರಾಹ್ಮಣರಿಂದ ಕಲಿಯಲು ಹಲವು ಬಾರಿ ಪ್ರಯತ್ನಿಸಿ ವಿಫಲನಾದ ಚಕ್ರವರ್ತಿ ಅಕ್ಬರ್ ಮೋಸಕ್ಕೆ ಮನಸ್ಸು ಮಾಡಿದ. ಒಂದು ಬೆಳಿಗ್ಗೆ ಬ್ರಾಹ್ಮಣ ಪ್ರಮುಖ ಸ್ನಾನ ಮಾಡಲು ಹೋದಾಗ ಗಂಗೆಯ ಘಟ್ಟದಲ್ಲಿ ಮೂರ್ಛೆ ಹೋಗುತ್ತಿದ್ದ ಬ್ರಾಹ್ಮಣ ಯುವಕನೊಬ್ಬನನ್ನು ನೋಡಿದ. ತುಂಬ ದೂರದಿಂದ ವೇದ ಕಲಿಯಲು ಬಂದಿದ್ದೇನೆಂದ ಯುವಕನ ಮೇಲೆ ಕರುಣೆ ಹುಟ್ಟಿ, ಅವನನ್ನು ಮನೆಗೆ ಕರೆದೊಯ್ದ ಆ ಪ್ರಮುಖ. ಆತ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿ, ತನ್ನ ಮಗನಂತೆ ಕಂಡು, ವಿದ್ಯೆ ಹೇಳಿಕೊಟ್ಟ. ಶಿಷ್ಯ ತನ್ನ ಮಗಳನ್ನು ಮೋಹಿಸಿ, ಲಗ್ನ ಮಾಡಿಕೊಡಲು ಕೇಳಿದಾಗ ಒಪ್ಪಿದ. ಇನ್ನೇನು ಮದುವೆ ಆಗುವಾಗ ತಾನು ಮಹಮ್ಮದೀಯ ಎಂದು ಆ ಶಿಷ್ಯ ನಿಜ ತಿಳಿಸಿದಾಗಲೂ ಕೊಟ್ಟ ಮಾತಿಗೆ ತಪ್ಪಲಿಲ್ಲ, ತನ್ನ ಶುಭಹಾರೈಕೆಯನ್ನು ನೀಡಿದ. ಆದರೆ ತನ್ನ ವಿದ್ಯೆ ಹಾಗೂ ತನ್ನ ಕುಲದ ಶುದ್ಧತೆ ಎಂದೆಂದೂ ನಾಶವಾದದ್ದಕ್ಕೆ ಕಾರಣನಾದೆನೆಂದು, ಅಗ್ನಿಪ್ರವೇಶ ಮಾಡಿ ಸತ್ತ.

ಇಂಗ್ಲಿಷ್ ಶಿಕ್ಷಣದ ಆರಂಭಕ್ಕೆ ಮುನ್ನ ಭಾರತ ತನ್ನ ಸಂಸ್ಕೃತಿಗೆ ಹೆಸರಾಗಿದ್ದು, ಸಾಂಪ್ರದಾಯಿಕ ಶಿಕ್ಷಣಕ್ಕೆ ಹೊರತಾದ ಕಲಿಕಾ ಪದ್ಧತಿಗಳು ಬ್ರಾಹ್ಮಣರನ್ನುಳಿದ ಸಮಾಜದ ವಿಮರ್ಶೆಗೆ ಹಾಗೂ ಸಂತೋಷಕ್ಕೆ ಕಾರಣವಾದುದನ್ನು ನೋಡಿದ್ದೇನೆ. ಯುರೋಪಿನಲ್ಲಾದರೋ ಉನ್ನತ ಸಂಗೀತವನ್ನು ಎಲ್ಲ ವರ್ಗಗಳವರೂ ಹೊಗಳುವರು. ಆದರೆ ಸಾಹಿತ್ಯ ಸಂಸ್ಕೃತಿಯ ಉನ್ನತ ಸೂಕ್ಷ್ಮಫಲಗಳು ತಕ್ಷಣ ಗ್ರಹಿಸಲ್ಪಟ್ಟು ವೃದ್ಧಿಸುವುವು. ತತ್ತ್ವಶಾಸ್ತ್ರ, ತರ್ಕ, ಹೆಚ್ಚೇಕೆ – ಪ್ರಾಚೀನ ಗ್ರಂಥಗಳ ಪಠನವೂ ಸರಿಪಡಿಸಲ್ಪಟ್ಟು, ನಿಯಂತ್ರಣಗೊಳ್ಳುವುವು. ಕೃತಿರಚನಾಶಕ್ತಿಯು ಭಗವಂತನ ಅನುಗ್ರಹ; ತರ್ಕಪಂಡಿತನು ಸುಳ್ಳು ತರ್ಕಕ್ಕೆ ಹೇಗೆ ಮಣಿಯನೋ ಹಾಗೆಯೇ ಸೂಕ್ಷ್ಮ ಹಾಗೂ ತೀವ್ರವಾದ ರೂಪದ ಮಾನಸಿಕ ಕ್ರಿಯೆಯಲ್ಲಿ ತರಬೇತಾದವನು ಶ್ರೇಷ್ಠತೆ ಮತ್ತು ಸೌಂದರ್ಯದಲ್ಲಿ ಕೊರತೆಯುಳ್ಳದ್ದನ್ನು ಎಂದಿಗೂ ಒಪ್ಪನು.

ಸಂಸ್ಥೆಯೊಂದು ಹುಟ್ಟುವಾಗಲೇ ಎಲ್ಲ ರೀತಿಯ ಅಧಿಕಾರ ಸಮ್ಮತಿಗಳನ್ನು ಪಡೆದುಕೊಂಡಿರುತ್ತದೆ. ಹೀಗೆ ವಿಶ್ವವಿದ್ಯಾಲಯ ವ್ಯವಸ್ಥೆಯು ಶತಮಾನಗಳ ಕಾಲ ಶಕ್ತಿ , ಪ್ರಭಾವಗಳಿಂದ ಪೋಷಣೆ ರಕ್ಷಣೆಗಳಿಗೆ ಒಳಪಟ್ಟುದನ್ನು ಕಾಣುತ್ತೇವೆ. ನಾಲ್ಕು ಐದನೆ ಶತಮಾನದ ಸಂಸ್ಕೃತ ಕಲಿಕೆ ಮತ್ತು ಸಾಹಿತ್ಯದ ಉನ್ನತಿಯೊಡನೆ ಪಾಟಲೀಪುತ್ರದ ಗುಪ್ತ ಸಾಮ್ರಾಜ್ಯವು ವೈಭವದಿಂದ ಮೆರೆದುದನ್ನು ನೆನಪು ಮಾಡಿಕೊಳ್ಳಬಹುದು. ಆಗಿನ್ನೂ ಬೌದ್ಧಪಂಥಗಳು ಅವನತಿ ಹೊಂದಿರಲಿಲ್ಲ, ಶ್ರೇಷ್ಠ ನಲಂದಾ ವಿಶ್ವವಿದ್ಯಾಲಯ ತನ್ನ ಶಕ್ತಿಯ ತುತ್ತತುದಿಯಲ್ಲಿತ್ತು. ಜ್ಞಾನದ ಹಲವು ಮಾರ್ಗಗಳಲ್ಲಿ ಸಂಸ್ಕೃತದಲ್ಲಿ ಸಂಶೋಧನೆಗಳನ್ನು ಅದು ಹಮ್ಮಿಕೊಂಡಿತ್ತು. ಹ್ಯುಯನ್‌ತ್ಸಾಂಗ್ ತಿಳಿಸುವಂತೆ, ಖಗೋಳ ವೀಕ್ಷಣಾಲಯವು ಜಲ–ಕಾಲಯಂತ್ರವನ್ನು ಇಟ್ಟು ಇಡೀ ಮಗಧರಾಜ್ಯದ ಕಾಲದ ಲೆಕ್ಕಾಚಾರವನ್ನು ನಿಯಂತ್ರಿಸುತ್ತಿತ್ತು. ವಿಶ್ವವಿದ್ಯಾಲಯದ ಪ್ರಸಿದ್ಧಿಯಿಂದ ಭಾರತದ ಎಲ್ಲೆಡೆಗಳಿಂದ ಮಾತ್ರವಲ್ಲದೆ ಚೀನಾದಿಂದಲೂ ವಿದ್ಯಾರ್ಥಿಗಳು ಆಕರ್ಷಿತರಾಗುತ್ತಿದ್ದರು. ನಲಂದಾದಲ್ಲಿ ಐದುನೂರು ಪ್ರಾಧ್ಯಾಪಕರುಗಳಿದ್ದು ಅವರಲ್ಲಿ ಒಬ್ಬ ಮುಖ್ಯನು ವಜ್ರಯೋಗಿನಿ ಎಂಬ ಹತ್ತಿರದ ಹಳ್ಳಿಯವನಾಗಿದ್ದನೆಂದು ವಿಕ್ರಮಪುರದ ವಂಶಗಳ ಐತಿಹ್ಯಗಳಿಂದ ತಿಳಿದುಬರುತ್ತದೆ.

ಏಳನೆ ಶತಮಾನದಲ್ಲಿ ಹ್ಯುಯನ್‌ತ್ಸಾಂಗ್‌ನ ಭೇಟಿಯೇ ನಮಗೆ ನಲಂದಾ ಬಗೆಗಿನ ಕೊನೆಯ ಪ್ರತ್ಯಕ್ಷ ಆಧಾರ. ಅನಂತರ ಒಂಬತ್ತನೆಯ ಶತಮಾನದಲ್ಲಿ ಮತ್ತೆ ಮರೆವಿನ ತೆರೆ ಸರಿದು, ಆಚಾರ್ಯ ಶಂಕರರ ಜೀವನ ಸಾಧನೆಗಳು ಕಾಣಬರುತ್ತವೆ. ಅಜ್ಞಾನ ಅನಕ್ಷರತೆಗಳನ್ನು ಬೆಳೆಸಿಕೊಂಡಿದ್ದ ಬೌದ್ಧರನ್ನು ಸುಸಂಗತ ತರ್ಕಸರಣಿ ಮತ್ತು ವಾದಗಳಿಂದ ಸೋಲಿಸಿ, ಅವರು ಹಿಡಿದಿಟ್ಟುಕೊಂಡಿದ್ದ ಪುಣ್ಯಕ್ಷೇತ್ರಗಳನ್ನು ಬಿಡಿಸಿಕೊಂಡು ತಮ್ಮ ಕಡೆಯವರಿಗೆ ನೀಡಿದ ಕತೆಗಳನ್ನು ಗಮನಿಸಿದಾಗ, ಸಂಸ್ಕೃತದ ಸಾಂಸ್ಕೃತಿಕ ವ್ಯವಸ್ಥೆ ತನ್ನ ಪರಿಪೂರ್ಣತೆಯನ್ನು ಕಂಡಿತ್ತು ಎಂಬುದು ವೇದ್ಯ. ಹಿಂದೆ ಅಜಂತಾ ಎಲ್ಲೋರಾಗಳಲ್ಲಿದ್ದ ಬೌದ್ಧ ಕಲಿಕಾ ಪದ್ಧತಿಯ ಮುಂದುವರಿಕೆಯೇ ಬ್ರಾಹ್ಮಣ ವಿದ್ಯಾವ್ಯವಸ್ಥೆಯಾಗಿದ್ದು, ಅದರ ಪ್ರತಿರೂಪವೇ ಬಂಗಾಳದಲ್ಲಿ ಈ ಹಿಂದಿನ ದಿನಗಳ ತೋಲ್‌ಗಳಲ್ಲಿದ್ದ ಜೀವನ ಎಂದು ನಾವು ತಿಳಿಯಬಹುದು. ವಿದ್ವಾಂಸರು ವಾದ ಸ್ಪರ್ಧೆಗಳಲ್ಲಿ ಭಾಗವಹಿಸುವ ವ್ಯವಸ್ಥೆ, ನಿರ್ಣಯದಲ್ಲಿ ಬೌದ್ಧರು ಸೋಲುವುದು, ತಮ್ಮ ಅಧೀನದಲ್ಲಿದ್ದ ಪುಣ್ಯಕ್ಷೇತ್ರಗಳನ್ನು ಗೆದ್ದವರಿಗೆ ನೀಡುವುದು– ಇವುಗಳಿಂದ ಇದಕ್ಕೂ ಬಹಳ ಹಿಂದಿನಿಂದ ಬಂದ ಪ್ರಾಚೀನ ಜಗತ್ತಿನ ಹೊಳಹುಗಳು ನಮಗೆ ಲಭ್ಯ.

ಸಾಧುಗಳ ಸಮ್ಮೇಳನಗಳು, ಒಪ್ಪಿತವಾದ ವಾದಾಂಶಗಳ ಮೇಲಿನ ಅವರ ಸಾರ್ವಜನಿಕ ಚರ್ಚೆ ಇವು ಗುಪ್ತರ ಕಾಲದಲ್ಲೇ ಪರಿಪೂರ್ಣತೆ ಪಡೆದ ವ್ಯವಸ್ಥೆಯೊಂದರ ಅಂಗಗಳಾಗಿದ್ದವು. ಆ ವ್ಯವಸ್ಥೆಯ ಉನ್ನತ ಪ್ರಭಾವ ಹಾಗೂ ಕ್ರಿಯೆ– ಶಂಕರಾಚಾರ್ಯರ ಯುಗ. ಬಂಗಾಳದಲ್ಲಿ ಗೌರ್ ಸಾಮ್ರಾಜ್ಯದ ಅಡಿ ಈ ವ್ಯವಸ್ಥೆ ಇನ್ನೂ ನಾಲ್ಕು ಶತಮಾನ ನೆಮ್ಮದಿಯಿಂದ ಮುಂದುವರಿದು, ಕೊನೆಗೆ ಶೇರ್ ಷಹಾನ ಬುದ್ಧಿವಂತಿಕೆ, ಅನಂತರದ ಮೊಗಲರ ಪದಾಘಾತದಿಂದ ತುಳಿಯಲ್ಪಟ್ಟಿತು. ಈ ಗೌರ್ ಸಾಮ್ರಾಜ್ಯ ಉದ್ದೇಶಪೂರ್ವಕವಾಗಿಯೆ ಕನೋಜ್ ಬ್ರಾಹ್ಮಣರ ಧಾರ್ಮಿಕ ಸಭೆಗಳೊಡನೆ ತನ್ನನ್ನು ಸಂಬಂಧಿಸಿಕೊಂಡಿತು. ಆ ವಂಶದ ಆಡಳಿತ ಇರುವವರೆಗೂ, ಸಿಂಹಾಸನದ ಹಿಂದೆ ಈ ಬ್ರಾಹ್ಮಣ ಪ್ರತಿನಿಧಿಯಿದ್ದು, ವಿವಿಧ ಸಂಸ್ಥೆಗಳನ್ನು ಪೋಷಿಸುವ, ಸಂದಿಗ್ಧತೆಯಲ್ಲಿ ಅರ್ಥನೀಡುವ ಅಧಿಕಾರವನ್ನು ನಿರ್ವಹಿಸುತ್ತಿದ್ದ. ಸಂಸ್ಕೃತದ ಈ ಸಾಂಸ್ಕೃತಿಕ ವಿಸ್ತಾರವೇ ಬಹುಕಾಲ ಬಾಳಿದ ಶಕ್ತ ಹಾಗೂ ಸುದೀರ್ಘ ರಾಷ್ಟ್ರೀಯ ಸ್ವಾತಂತ್ರ್ಯದ ಹಿನ್ನೆಲೆಯಾಗಿತ್ತು ಎಂಬುದನ್ನು ನಾವು ಕಡೆಗಾಣಿಸುವಂತಿಲ್ಲ. ಭೌಗೋಳಿಕವಾಗಿ ಸ್ಥಗಿತವಾದ ಕುರುಡು ಓಣಿಯಲ್ಲೇ ನಾವು ಸಂಪ್ರದಾಯಗಳ ಸಮಗ್ರತೆಯನ್ನೂ, ವ್ಯವಸ್ಥೆಗಳನ್ನೂ ಕಾಣಬಹುದು; ಇತರೆಡೆ ವಿದೇಶೀಯ ವಿಜಯ ಅವನ್ನು ನುಚ್ಚುನೂರಾಗಿಸಿರುತ್ತದೆ. ಹೀಗೆ ನಾವು ಪೂರ್ವ ಬಂಗಾಳ, ದಕ್ಷಿಣದ ತುದಿಗಳಲ್ಲಿ ಇತರೆಡೆ ಮಾಯವಾಗಿ ಹೋಗಿರುವ ಪ್ರಾಚೀನತೆಯ ಕುರುಹುಗಳನ್ನು ನೋಡಬಹುದು. ತೋಲ್‌ಗಳಲ್ಲಿನ ಜೀವನದ ಕಾಡಿಸುವ ನೆನಪುಗಳು, ವಿವಾಹಗಳಲ್ಲಿನ ವಿದ್ವಾಂಸರ ವಾದಸಭೆಗಳಲ್ಲಿನ ಇಂತಹ ಮಧ್ಯಯುಗೀನ ಪ್ರಪಂಚದ ಪಳೆಯುಳಿಕೆಗಳು ಅವನ್ನು ಕೂಗಿ ಸಾರುತ್ತವೆ. ನಲಂದಾ, ಬನಾರಸ್, ಋಷಿಕೇಶ, ನಾಸಿಕ್ ಮತ್ತು ಉಜ್ಜಯಿನಿ ಗಳೆಂಬ ಜ್ವಾಲೆಗಳಿಂದ ಹೊರಬಿದ್ದ ಕಿಡಿಗಳಾಗಿ ಇನ್ನೂ ಇರುವ ಮಿಥಿಲಾ, ನದಿಯಾ ಮತ್ತು ವಿಕ್ರಮಪುರಗಳು ಲೌಕಿಕ ಯಶಸ್ಸಿಗಿಂತ ಮಿಗಿಲಾಗಿ, ಅಂತಃಕರಣ, ಅಮೂರ್ತ ಚೇತನಗಳೇ ಜೀವನವಾಗಿದ್ದ ಆ ಕಾಲ ಇತ್ತೆಂಬುದನ್ನು ಪ್ರಮಾಣೀಕರಿಸುತ್ತವೆ. ಇವುಗಳು ಕಲಿಕೆಯ ಅದ್ಭುತ ವಿನ್ಯಾಸದ ಭಾಗಗಳಾಗಿದ್ದು, ಇದನ್ನು ಪುನಃ ಬೆಳಕಿಗೆ ತರುವುದು ತಾಯಿ ಭಾರತಿಯ ಮಕ್ಕಳ ಕರ್ತವ್ಯವಾಗಬೇಕು. ❁

## ಶ್ರೀ ರಾಮಾನುಜರ ಭಕ್ತಿ

ಕಾಂಚೀಪೂರ್ಣನೆಂಬ ಮಹಾಭಕ್ತನೊಬ್ಬನು ಕಾಂಚೀಪುರದಲ್ಲಿ ವಾಸಿಸುತ್ತಿದ್ದನು. ಜಾತಿಯಿಂದ ಶೂದ್ರನಾಗಿದ್ದರೂ ಸಹ, ಆತನ ಗಾಢವಾದ ಭಗವದ್ಭಕ್ತಿಗಾಗಿ ಬ್ರಾಹ್ಮಣರೂ ಸಹ ಅವನನ್ನು ಗೌರವಿಸುತ್ತಿದ್ದರು. ಒಂದು ಸಂಜೆ ರಾಮಾನುಜರು ತಮ್ಮ ಗುರುಗಳ ಮನೆಯಿಂದ ಹಿಂದಿರುಗಿ ಬರುತ್ತಿದ್ದಾಗ ಅಕಸ್ಮಾತ್ತಾಗಿ ಈತನನ್ನು ಭೇಟಿ ಮಾಡಿದರು. ಈ ಸಾಧುವಿನ ಮುಖದಲ್ಲಿ ದೇದೀಪ್ಯಮಾನವಾಗಿ ಮಿನುಗುತ್ತಿದ್ದ ದಿವ್ಯಪ್ರಭೆಯನ್ನು ಕಂಡ ಅವರು, ಸಹಜವಾಗಿಯೇ ಈತನೆಡೆಗೆ ಆಕರ್ಷಿತರಾದರು. ಅತ್ಯಂತ ವಿನಯದಿಂದ ಅವನನ್ನು ಆ ದಿನ ತಮ್ಮ ಮನೆಗೆ ಬಂದು ರಾತ್ರಿಯ ಭೋಜನವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು. ಬಾಲಕನ ದಿವ್ಯಲಕ್ಷಣಗಳನ್ನೂ ಸ್ವರ್ಗೀಯ ಸೌಂದರ್ಯವನ್ನೂ ಕಂಡ ಅವನು ಆಮಂತ್ರಣವನ್ನು ನಿರಾಕರಿಸದಾದನು. ಸಾಧು ತಮ್ಮ ಅತಿಥಿಯಾದನೆಂದು ರಾಮಾನುಜರಿಗೆ ಹಿಡಿಸಲಾರದ ಸಂತೋಷ. ಅತಿಥಿಯ ಊಟವಾದ ಮೇಲೆ ಭಕ್ತಿಯಿಂದ ಅತಿಥಿಯ ಸೇವೆಯನ್ನು ಮಾಡಬೇಕೆಂದು ರಾಮಾನುಜರು ಅವನ ಕಾಲೊತ್ತುವುದಕ್ಕೆ ಮುಂದಾಗಲು, ಆ ಸಾಧು ಅದಕ್ಕೊಪ್ಪದೆ, ''ನಾನು ಶೂದ್ರ, ಕೀಳು ಜಾತಿಯವನು. ಅಯ್ಯೋ ದೇವರೆ! ನಿಮ್ಮ ಸೇವಕನಿಗೆ ನೀವು ಹೇಗೆ ಸೇವೆ ಮಾಡುವಿರಿ?'' ಎಂದು ಅವರನ್ನು ನಿವಾರಿಸಿದನು. ಇದರಿಂದ ದುಃಖಿತರಾದ ರಾಮಾನುಜರು, ''ನಿಮ್ಮಂತಹ ಮಹಾತ್ಮರ ಸೇವೆ ಮಾಡಬಾರದು ಎಂದರೆ ಅದು ನನ್ನ ದುರದೃಷ್ಟ. ಸ್ವಾಮಿ, ಜನಿವಾರ ಹಾಕಿಕೊಂಡುಬಿಟ್ಟ ಮಾತ್ರಕ್ಕೆ ಒಬ್ಬ ಬ್ರಾಹ್ಮಣನಾಗುತ್ತಾನೆಯೆ? ದಯವಿಟ್ಟು ಹೇಳಿರಿ. ಯಾರು ಭಗವಂತನಲ್ಲಿ ಭಕ್ತಿಯುಳ್ಳವನೋ ಅವನು ಮಾತ್ರವೇ ನಿಜವಾದ ಬ್ರಾಹ್ಮಣ. ತಿರುಪ್ಪಾಣಿ ಆಳ್ವಾರ್ ಕೀಳುಜಾತಿಯವರಾದರೂ ಹೇಗೆ ವಿಪ್ರೋತ್ತಮರಿಂದ ಪೂಜಿಸಲ್ಪಟ್ಟರು ಎಂಬುದು ನಿಮಗೆ ಚೆನ್ನಾಗಿ ಗೊತ್ತಿದೆಯಲ್ಲವೆ?'' ಎಂದರು.

ಬಾಲಕನ ಭಕ್ತಿಯನ್ನು ನೋಡಿ ಬೆರಗಾದ ಕಾಂಚೀಪೂರ್ಣರಿಗೆ ಇವನು ಸಾಮಾನ್ಯ ಮನುಷ್ಯನಲ್ಲವೆಂದೆನಿಸಿತು.

*('ಶ್ರೀ ರಾಮಾನುಜರ ಜೀವನ ಚರಿತ್ರೆ', ಸ್ವಾಮಿ ರಾಮಕೃಷ್ಣಾನಂದ, ಪು. ೮೨–೮೩, ಮೈಸೂರು ಆಶ್ರಮದ ಪ್ರಕಟಣೆ)*

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ**
ಅನುವಾದ : **ಸ್ವಾಮಿ ಜ್ಞಾನಯೋಗಾನಂದ**



## ಭಾಗ ೫

**ನಿ**ವೇದಿತಾ ಶಾಲೆಯಲ್ಲಿ ಒಂದು ಕುದುರೆ ಗಾಡಿಯಿತ್ತು. ಶ್ರೀಮಾತೆ ಆ ಗಾಡಿಯಲ್ಲೇ ಗಂಗಾಸ್ನಾನ ಮಾಡಲು ಹೋಗುತ್ತಿದ್ದರು. ವಾರದಲ್ಲಿ ಒಂದು ದಿನ, ಶಾಲೆಗೆ ರಜೆಯಿದ್ದಂದು ಆ ಗಾಡಿಯಲ್ಲೇ ನಾವು ಅವರನ್ನು ಕರೆದುಕೊಂಡು ಹೋಗುತ್ತಿದ್ದೆವು. ಕೆಲವೊಮ್ಮೆ ಮೈದಾನ, ಕೆಲವೊಮ್ಮೆ ಮ್ಯೂಸಿಯಂ, ಅದೇ ರೀತಿ ಆಲಿಫುರ್ ಮೃಗಾಲಯ, ಶಿವಪುರದ ಬೊಟಾನಿಕಲ್ ಉದ್ಯಾನ, ಕಾಲೀಘಾಟ್-ಇತ್ಯಾದಿ. ಕೆಲವೊಮ್ಮೆ ಕಾಳೀಪೂಜೆಯ ದೀಪಾವಳಿ ಬೆಳಕನ್ನು ತೋರಿಸಲು ಬಡಾಬಜಾರ್‌ಗೆ ಕರೆದುಕೊಂಡು ಹೋಗುತ್ತಿದ್ದೆವು. ಹೆಚ್ಚಾಗಿ ಶ್ರೀಮಾತೆ ಗಾಡಿಯಿಂದ ಇಳಿದು, ಕಾಲುನಡಿಗೆಯಲ್ಲೇ ಎಲ್ಲವನ್ನೂ ನೋಡುತ್ತ, ಸುತ್ತಾಡುತ್ತ ಮುಗ್ಧ ಹುಡುಗಿಯಂತೆ ಆನಂದಿಸುತ್ತಿದ್ದರು. ಅವರನ್ನು ಈ ರೀತಿ ಕರೆದುಕೊಂಡು ಹೋಗಲು ನಮಗೆ ಎರಡು ಉದ್ದೇಶವಿರುತ್ತಿತ್ತು: ಮೊದಲನೆಯದಾಗಿ, ಅವರು ಕೋಣೆಯೊಳಗೆ ಒಂದೇ ಸಮನೆ ಕಟ್ಟಿಹಾಕಿದಂತೆ ಇರುತ್ತಿದ್ದರು; ಹೊರಗಿನ ಗಾಳಿಸೇವನೆಯಿಂದ ಅವರ ಆರೋಗ್ಯ ಉತ್ತಮಗೊಳ್ಳಬಹುದು ಎಂದು. ಎರಡನೆಯದಾಗಿ, ದಕ್ಷಿಣೇಶ್ವರದ ನಹಬತ್‌ನಲ್ಲಿ ಅವರಿಗೆ ಉಂಟಾಗಿದ್ದ ಕಾಲಿನ ವಾತದಿಂದಾಗಿ ಅವರು ತುಸು ಕುಂಟುತ್ತಾ ನಡೆಯಬೇಕಾಗಿತ್ತು; ನಡೆಯುವುದರಿಂದ ಅದು ಸ್ವಲ್ಪವಾದರೂ ವಾಸಿಯಾಗಬಹುದು ಎಂದು.

ಒಂದು ದಿನ ಬೆಳಿಗ್ಗೆ ಕಾಂಕುರಗಾಛಿ ಯೋಗೋದ್ಯಾನದ ಅಧ್ಯಕ್ಷರಾದ ಸ್ವಾಮಿ ಯೋಗವಿನೋದರು ಬಂದರು. ಶ್ರೀಮಾತೆಯವರಿಗೆ ಪ್ರಣಾಮ ಮಾಡುವ ತಮ್ಮ ಇಚ್ಛೆಯನ್ನು ಅವರು ತಿಳಿಸಿದರು. ನಾವು ಅವರನ್ನು ಶ್ರೀಮಾತೆಯವರಿದ್ದ ಮೇಲಂತಸ್ತಿಗೆ ಕರೆದುಕೊಂಡು ಹೋದೆವು. ಮೇಲೆ ಹೋದ ಅವರು ಶ್ರೀಮಾತೆಯವರಿಗೆ ಶ್ರೀಕೃಷ್ಣ ಜನ್ಮಾಷ್ಟಮಿಯ ಉತ್ಸವಕ್ಕೆ ಆಮಂತ್ರಣ ನೀಡಿದರು. ಅವರನ್ನು ಕರೆದುಕೊಂಡು ಹೋಗಲು ಒಪ್ಪಿಗೆ ಪಡೆದರು. ಅದರಂತೆ, ಜನ್ಮಾಷ್ಟಮಿಯಂದು ನಿವೇದಿತಾ ವಿದ್ಯಾಲಯದ ಗಾಡಿಯಲ್ಲಿ ಶ್ರೀಮಾತೆ, ಲಕ್ಷ್ಮೀದೀದಿ, ಗೋಲಾಪ್ ಮಾ, ನಳಿನಿ ಹಾಗೂ ರಾಧು ಇವರನ್ನು ನಾವು ಕರೆದುಕೊಂಡು ಹೋದೆವು. ಉತ್ಸವ ತುಂಬ ಚೆನ್ನಾಗಿತ್ತು. ಅಲ್ಲಿ ಬಹಳ ಮಂದಿ ಸೇರಿದ್ದರು. ಗಿರೀಶ್‌ಚಂದ್ರ ಹಾಗೂ ಮಾಸ್ಟರ್ ಮಹಾಶಯ ಅಲ್ಲಿದ್ದರು. ವಿವಿಧ ತಂಡದವರು ಸಂಕೀರ್ತನೆ ಮಾಡುತ್ತಿದ್ದರು. ಆದರೆ ನಡುನಡುವೆ ಗೋಲಾಪ್ ಮಾ ಬಂದು, ''ಶ್ರೀಮಾತೆಯವರನ್ನು ಮರಳಿ ಕರೆದುಕೊಂಡು ಹೋಗೋಣ'' ಎಂದು ಹೇಳಿದರು. ನಾವು ಯೋಗವಿನೋದರಿಗೆ ಇದನ್ನು ತಿಳಿಸಿದೆವು. ಆದರೆ ಅವರು ಕಳುಹಿಸಲು ಬಿಡಲಿಲ್ಲ. ಹಲವು ವಿಧವಾಗಿ ಅವರಿಗೆ ಹೇಳಿ ಒಪ್ಪಿಸಿ, ಅವರು ಬಿಟ್ಟುಕೊಡುವಾಗ ಸಂಜೆ ಆರಾಗಿತ್ತು.

'ಉದ್ಬೋಧನ'ಕ್ಕೆ ಮರಳಿ ಬಂದ ಮೇಲೆ ಗೋಲಾಪ್ ಮಾ ಹಾಗೂ ಲಕ್ಷ್ಮೀದೀದಿ ಹೇಳಿದ್ದೇನೆಂದರೆ, ಶ್ರೀಮಾತೆಯವರಿಗೆ ಅಲ್ಲಿ ತುಂಬ ತೊಂದರೆಯಾಗಿತ್ತು; ಉತ್ತರೀಯವನ್ನು ಮೈಯೆಲ್ಲ ಹೊದ್ದುಕೊಂಡೇ ಇಡೀ ದಿನ ಇರಬೇಕಾಯಿತು. ಗುಂಪುಗುಂಪಾಗಿ ಜನ ಪ್ರಣಾಮ ಮಾಡಲು ಬರುತ್ತಿದ್ದರು. ಸ್ವಲ್ಪವೂ ಬಿಡುವಿರಲಿಲ್ಲ. ಇಂಥಾ ಅಸಾಧ್ಯ ಸೆಖೆಯಲ್ಲಿ ಅವರು ಮರದ ಪ್ರತಿಮೆಯ ಹಾಗೆ ಒಂದೇ ರೀತಿ ಕುಳಿತುಕೊಳ್ಳಬೇಕಾಗಿತ್ತು. ಅವರಿಗೆ ಎಲ್ಲದಕ್ಕಿಂತ ಹೆಚ್ಚಿನ ಸಂಕಟವಾದುದು, ಶ್ರೀರಾಮಕೃಷ್ಣರ ಸಮಾಧಿಯನ್ನು ನೋಡಿ. *(ಶ್ರೀರಾಮಕೃಷ್ಣರ ಮಹಾಸಮಾಧಿಯ ನಂತರ ಅವರ ಪವಿತ್ರ ಅಸ್ಥಿಯನ್ನು ಅಲ್ಲೇ ಸ್ಥಾಪಿಸಲಾಗಿತ್ತು, ಆ ಜಾಗವನ್ನು ನೋಡಿ ಶ್ರೀಮಾತೆಗೆ ಸಂಕಟವಾಯಿತು.)*

ಒಂದು ದಿನ ಗಿರೀಶಚಂದ್ರ ಶ್ರೀಮಾತೆಯವರನ್ನು ಥಿಯೇಟರ್ ತೋರಿಸಲು ಕರೆದುಕೊಂಡು ಹೋದ. ಅವರಿಗಾಗಿ ಒಂದು ರೋಯಲ್ ಬಾಕ್ಸನ್ನು ಮೀಸಲಿಟ್ಟಿದ್ದ. ಅಲ್ಲದೆ, ಅವರಿಗಾಗಿ ಒಂದು ಕೈ-ಬೀಸಣಿಗೆಯ ವ್ಯವಸ್ಥೆಯನ್ನೂ ಮಾಡಿದ್ದ. 'ಬಿಲ್ವಮಂಗಲ ಠಾಕೂರ್' ನಾಟಕ ನಡೆಯುತ್ತಿತ್ತು. ಸ್ವತಃ ಗಿರೀಶಚಂದ್ರ ಕಳ್ಳ ಸಂನ್ಯಾಸಿಯ ವೇಷ ಹಾಕಿ ಅಭಿನಯಿಸಿದ್ದ. ಅವನು ಥಾಕ್ ಮಾಣಿಕನಿಗೆ ಕೃಷ್ಣಪ್ರೇಮವನ್ನು ಕಲಿಸಿಯೇ ತೀರುತ್ತೇನೆಂದು



**ಗೋಪಾಲೇರ್ ಮಾ (ಅಘೋರಮಣಿ ದೇವಿ)**

ಸಂಭಾಷಣೆ ಹೇಳುವಾಗ ಶ್ರೀಮಾತೆ ಜೋರಾಗಿ ನಗುತ್ತ ಹೇಳಿದರು ''ಈ ವಯಸ್ಸಿನಲ್ಲಿ ಇನ್ನು ಏಕೆ?'' ಎಂದು. ಅನಂತರ ಬಿಲ್ವಮಂಗಲನ ಏಕನಿಷ್ಠೆಯ ಪ್ರೇಮವನ್ನು ನೋಡಿ 'ಆಹ! ಆಹ!' ಎಂದರು.

ಒಬ್ಬಾಕೆ ಬ್ರಾಹ್ಮಣ ವೃದ್ಧೆ, ಗಂಗಾನದೀ ತೀರದಲ್ಲಿ ಕಾಮಾರಹಾಟಿಯ ಸಾಗರ ದತ್ತನ ದೇವಾಲಯದಲ್ಲಿ ಒಂದು ಕೋಣೆಯಲ್ಲಿ ವಾಸಿಸುತ್ತಿದ್ದಳು. ಆಕೆ ಶ್ರೀರಾಮಕೃಷ್ಣರನ್ನು ಗೋಪಾಲನೆಂದು ದರ್ಶನದಲ್ಲಿ ಕಂಡಿದ್ದಳು. ಅವರೂ ಅವಳನ್ನು ತಾಯಿಯೆಂದೇ ಕರೆಯುತ್ತಿದ್ದರು. ಶ್ರೀಮಾತೆ ಅವಳನ್ನು ಅತ್ತೆಯಂತೆ ಕಾಣುತ್ತಿದ್ದರು. ಭಕ್ತರು ಅವಳನ್ನು 'ಗೋಪಾಲೇರ್ ಮಾ' (ಗೋಪಾಲನ ತಾಯಿ) ಎಂದು ಕರೆಯುತ್ತಿದ್ದರು.

ಅವಳು ತುಂಬ ವೃದ್ಧೆಯಾದಾಗ ಅವಳ ಸೇವೆ ಮಾಡುವವರು ಯಾರೂ ಇಲ್ಲದಾಗ, ಸೋದರಿ ನಿವೇದಿತಾ ಅವರನ್ನು ೧೭, ಬೋಸ್‌ಪಾರಾ ಲೇನ್‌ನಲ್ಲಿದ್ದ ತನ್ನ 'ಬಾಲಿಕಾ ವಿದ್ಯಾಲಯ'ದ ಒಂದು ಕೋಣೆಗೆ ಕರೆಸಿಕೊಂಡಳು. ಅಲ್ಲಿ ಅವರ ಸೇವೆಗೆ ಒಬ್ಬಳು ಹೆಂಗಸನ್ನು ಆಯೋಜಿಸಿದ್ದಳು. 'ಉದ್ಬೋಧನ' ದಿಂದ ಎರಡು ಬಾರಿ ಅವಳಿಗೆ ಊಟವನ್ನು ಕಳುಹಿಸಿಕೊಡುತ್ತಿದ್ದರು. ಶ್ರೀಮಾತೆ ನಡುನಡುವೆ ಅವಳನ್ನು ನೋಡಿಕೊಂಡು ಬರುತ್ತಿದ್ದರು.

ಗೋಪಾಲೇರ್ ಮಾ ದೇಹದಲ್ಲಿ ಯಾವುದೇ ರೋಗ ಕಾಣಿಸುತ್ತಿರಲಿಲ್ಲ. ಅತಿಯಾದ ವೃದ್ಧಾಪ್ಯದ ಭಾರದಿಂದಾಗಿ ಅವಳಿಗೆ ದೇಹವನ್ನು ಸಾಗಿಸುವುದು ಸಾಧ್ಯವಾಗುತ್ತಿರಲಿಲ್ಲ ಅಷ್ಟೆ. ಆದ್ದರಿಂದ ಕೊನೆಕೊನೆಗೆ ಅವಳಲ್ಲಿ ಚೈತನ್ಯವೇ ಇರುತ್ತಿರಲಿಲ್ಲ. ಮಲಮೂತ್ರ ವಿಸರ್ಜನೆ ಮಲಗಿದಲ್ಲೇ ಆಗಿಬಿಡುತ್ತಿತ್ತು. ಆದರೆ ಎರಡು ವಿಷಯಗಳಲ್ಲಿ ಅವಳ ಜ್ಞಾನ ಎಂದೂ ಲೋಪವಾಗಲಿಲ್ಲ. ಒಂದು, ಅವಳ ಜಪದ ಮಾಲೆ. ಮಾಲೆ ಅವಳ ಯಾವಾಗಲೂ ಕೈಯ ಬಳಿ ಇರಬೇಕಿತ್ತು. ಇಲ್ಲದಿದ್ದರೆ ಆಕೆ ಚಡಪಡಿಸುತ್ತಿದ್ದಳು, ಗದ್ದಲವೆಬ್ಬಿಸುತ್ತಿದ್ದಳು. ಕೈಯಲ್ಲಿ ಮಾಲೆ ಯಾವಾಗಲೂ ಇರುತ್ತಿತ್ತು. ಇನ್ನೊಂದು, ಅವಳು ಯಾರನ್ನೂ ಗುರುತು ಹಿಡಿಯುತ್ತಿರಲಿಲ್ಲ ; ಆದರೆ, ಶ್ರೀಮಾತೆ ಹೋದರೆ ಮಾತ್ರ ಗೊತ್ತಾಗಿಬಿಡುತ್ತಿತ್ತು. ಅವರು ಸ್ಪಷ್ಟವಾದ ಧ್ವನಿಯಲ್ಲಿ ಹೇಳುತ್ತಿದ್ದಳು, ''ಯಾರು, ಸೊಸೆ ಅಲ್ಲವೆ? ಬಾಮ್ಮಾ.''

ಕ್ರಮೇಣ ಅವರ ನಾಡಿಮಿಡಿತ ಕಡಿಮೆಯಾಗುತ್ತ ಬಂತು. ಎದೆಬಡಿತ ನಿಲ್ಲುತ್ತ ಬಂತು. ವೈದ್ಯರು 'ಇನ್ನು ತಡವಿಲ್ಲ' ಎಂದಾಗ ಸೋದರಿ ನಿವೇದಿತಾ, ''ಹೆಚ್ಚು ಕಡಿಮೆ ಗಂಗಾತೀರದಲ್ಲೇ ಅವರು ಜೀವನವೆಲ್ಲ ಕಳೆದರು. ಈಗ ಗಂಗಾಯಾತ್ರೆ ಮಾಡಿಸುವುದೇ ಒಳ್ಳೆಯದು'' ಎಂದಳು. ಆಗ ರಾತ್ರಿ ಮೊದಲ ಪ್ರಹರವಾಗಿತ್ತು. ಅವರನ್ನು ಕುಮಾರತುಲಿಯಲ್ಲಿನ ಗಂಗಾಯಾತ್ರಿಕರ ಮನೆಯ ಒಂದು ಪ್ರತ್ಯೇಕ ಕೋಣೆಗೆ ಕರೆದುಕೊಂಡು ಹೋದೆವು. ಅಲ್ಲಿ ಅವಳು ನಾಲ್ಕು ದಿನ ಇದ್ದಳು. ಪ್ರತಿದಿನವೂ ಅವಳನ್ನು ನೋಡಲು ಶ್ರೀಮಾತೆ ಹೋಗುತ್ತಿದ್ದರು. ಅವರು ಹೋದಾಗ ಗೋಪಾಲೇರ್ ಮಾ ಕಣ್ಣುಗಳು ಒಂದು ಕ್ಷಣ ತೆರೆದು ಮುಚ್ಚಿಕೊಳ್ಳುತ್ತಿದ್ದವು. ಉಳಿದಂತೆ, ಹಗಲು ರಾತ್ರಿ ಅವಳ ಕಣ್ಣುಗಳು ಮುಚ್ಚಿರುತ್ತಿದ್ದವು. ಕೈಯಲ್ಲಿ ಜಪಮಾಲೆ ಇರುತ್ತಿತ್ತು; ನಡುನಡುವೆ ಮಾಲೆಯ ಮೇಲೆ ಕೈಬೆರಳುಗಳು ಅಲುಗಾಡುತ್ತಿದ್ದವು.

ನಾಲ್ಕನೆಯ ದಿನ ರಾತ್ರಿ ಒಂದು ಗಂಟೆಯ ಹೊತ್ತಿಗೆ ಆಕೆ ಕೊನೆಯುಸಿರನ್ನು ಎಳೆಯುವಳೆಂಬುದು ಗೊತ್ತಾದಾಗ, ವೈದ್ಯರು ಆದೇಶಿಸಿದಂತೆ ಅವಳನ್ನು ಗಂಗಾನದಿಯ ನೀರಿಗೆ ಇಳಿಸಿದರು. ನೋಡುತ್ತಿದ್ದಂತೆಯೇ ಅವಳ ಪ್ರಾಣವಾಯು ಹೊರಟು ಹೋಯಿತು.

ಮೊದಲೇ ಹೇಳಿದಂತೆ, ಶ್ರೀಮಾತೆಯವರನ್ನು ಹಲವು ಪ್ರದೇಶಗಳಿಗೆ ಕರೆದುಕೊಂಡು ಹೋಗುತ್ತಿದ್ದೆವು – ಒಂದು ದಿನ ಅವರನ್ನು ಚಿತ್ಪುರ ರೋಡ್‌ನಲ್ಲಿದ್ದ ವಿ.ದತ್ತ ಎಂಬ ಫೋಟೋ ತೆಗೆಯುವ ಸ್ಟುಡಿಯೋಗೆ ಕರೆದುಕೊಂಡು ಹೋದೆವು. ಅಲ್ಲಿ ಮೊದಲೇ ವ್ಯವಸ್ಥೆ ಮಾಡಿದ್ದಂತೆ, ಶ್ರೀಮಾತೆಯವರ ನಾಲ್ಕು ಫೋಟೋಗಳನ್ನು ತೆಗೆಯಲಾಯಿತು.

ಶ್ರೀಮಾತೆಯವರ ಹುಟ್ಟೂರಿನಲ್ಲಿ ಪ್ರತಿವರ್ಷವೂ ಶ್ರೀಜಗದ್ಧಾತ್ರೀ ಪೂಜೆ ನಡೆಯುತ್ತಿತ್ತು. ೧೯೦೪ನೇ ಇಸವಿಯ ಪೂಜೆಗೆ ಶ್ರೀಮಾತೆ ಹೋಗಲಿಲ್ಲ. ಕಾರಣ, ಈ ಬಾರಿ ಅವರು ಕಲ್ಕತ್ತೆಗೆ ಬಂದು ಒಂದು ವರ್ಷವೂ ಆಗಿರಲಿಲ್ಲ. ಇಷ್ಟರಲ್ಲೇ ಹೋಗಿ ಬರುವುದೆಂದರೆ ಖರ್ಚೂ ಕಡಿಮೆಯಿಲ್ಲ. ಅವರಂತೂ ಏಕಾಕಿಯಲ್ಲ, ಅವರೊಂದಿಗೆ ಚಿಕ್ಕಪ್ಪ, ರಾಧು, ಅವಳ ತಾಯಿ, ಮಾಕು

(ಶ್ರೀಮಾತೆಯವರ ಇನ್ನೊಬ್ಬ ತಮ್ಮನ ಮಗಳು), ನಳಿನಿ, ಭಾನಿ ಚಿಕ್ಕಮ್ಮ ಇವರೆಲ್ಲ ಇದ್ದರು. ಇದಲ್ಲದೆ, ಕಳೆದ ಬಾರಿ ಹಳ್ಳಿಗೆ (ಜಯರಾಮಬಾಟಿಗೆ) ಹೋದಾಗ ಶ್ರೀಮಾತೆಯವರ ಆರೋಗ್ಯವೂ ಬಹಳ ಕೆಟ್ಟುಹೋಗಿತ್ತು. ಈ ಬಾರಿ ಕಲ್ಕತ್ತೆಯಲ್ಲಿ ಸ್ವಲ್ಪ ಸಮಯ ತಂಗಿದರೆ ಅವರ ಅನಾರೋಗ್ಯ ವಾಸಿಯಾಗಬಹುದು ಎಂದು ಭಕ್ತರೆಲ್ಲರೂ ಒಕ್ಕೊರಲಿನಿಂದ ಹೇಳಿದ್ದರಿಂದ ಅವರು ಈ ಬಾರಿ ಹಳ್ಳಿಗೆ ಹೋಗಲಿಲ್ಲ. ಆದರೆ ಅವರು ನನ್ನನ್ನು ಕಳುಹಿಸಿದರು. ಶ್ರೀಮಾತೆಯವರ ಮೂರನೆಯ ತಮ್ಮ[೧] ವರದಾಕುಮಾರನೂ[೨] ನನ್ನೊಂದಿಗಿದ್ದರು. ಪೂಜೆಯ ಸಲುವಾಗಿ ನಾನು ಅಲ್ಲಿ ಕೆಲವು ದಿನ ತಂಗಿದ್ದು, ಮರಳಿ ಬಂದೆ. ಈ ಬಾರಿ ತಾರಕೇಶ್ವರ ಮೂಲಕ ಹೋಗಿದ್ದೆವು, ಹಾಗೂ ಘಾಟಾಲ್ ಮೂಲಕ ನಾನು ಮರಳಿ ಬಂದೆ.

ಈ ಜಗದ್ಧಾತ್ರೀ ಪೂಜೆಗೆ ಒಂದಿಷ್ಟು ಇತಿಹಾಸವಿದೆ. ಅದನ್ನಿಲ್ಲಿ ಹೇಳುತ್ತೇನೆ. ಉಳಿದ ಪ್ರದೇಶಗಳಂತೆ ಶ್ರೀಮಾತೆಯವರ ಮನೆಯಲ್ಲಿ ನಡೆಯುವ ಜಗದ್ಧಾತ್ರೀಪೂಜೆ ಒಂದು ದಿನದ ಪೂಜೆಯಲ್ಲ. ಅಲ್ಲಿ ಮೂರು ದಿನ ಪೂಜೆ ನಡೆಯುತ್ತದೆ. ನಾಲ್ಕನೇ ದಿನ ದುರ್ಗಾಪೂಜೆಯಂತೆ ವಿಸರ್ಜನೆ ನಡೆಯುವುದು. ಹೀಗೆ ನಡೆಯುವುದಕ್ಕೆ ಕಾರಣವೇನೆಂಬುದನ್ನು ಇಲ್ಲಿ ನೀಡಲಾಗಿದೆ.

ಹಿಂದೊಮ್ಮೆ ನಾನು ಸುಧೀರ್ ಮಹಾರಾಜರು (ಸ್ವಾಮಿ ಶುದ್ಧಾನಂದ) ಹಾಗೂ ಸ್ವಾಮಿ ಸೋಮಾನಂದರೊಡನೆ ಘಾಟಾಲ್ ಮೂಲಕ ಕಾಲ್ನಡಿಗೆಯ ದಾರಿಯಲ್ಲಿ ಈಶ್ವರಚಂದ್ರ ವಿದ್ಯಾಸಾಗರನ ಜನ್ಮಭೂಮಿಯಾದ ವೀರಸಿಂಹ ಗ್ರಾಮದ ಮೂಲಕ ಜಯರಾಮಬಾಟಿಗೆ ಹೋಗಿದ್ದೆ. ಆಗ ಅಲ್ಲಿ ಜಗದ್ಧಾತ್ರೀ ಪೂಜೆ ಹೀಗೆ ನಡೆಯುತ್ತಿದ್ದುದನ್ನು ನೋಡಿ, ಅದನ್ನು ಕುರಿತು ಶ್ರೀಮಾತೆಯವರನ್ನು ಕೇಳಿದೆವು. ಅವರು ಹೀಗೆ ಹೇಳಿದರು:

''ಮೊದಲ ಬಾರಿ ಜಗನ್ಮಾತೆಯ ಪೂಜೆ ನಡೆಯಿತು. ಮರುದಿನ ಕಾಳಿ (ಶ್ರೀಮಾತೆಯವರ ನಡುವಿನ ತಮ್ಮ, ಕಾಳೀಕುಮಾರ) ಕೇಳಿದ, 'ಅಕ್ಕಾ, ದಧಿಕರ್ಮ[೩] ಮಾಡಲೆ?' ಅಂತ. ನನಗೆ ನೆನಪಾಯಿತು, ಅಂದು ವಿಶುದ್ಧ ವಾರ (ಗುರುವಾರ, ಅದು ವಿಸರ್ಜನೆಗೆ ಶುಭದಿನವಲ್ಲ) ಎಂದು. ಆದ್ದರಿಂದ ನಾನು ಅದಕ್ಕೆ ಒಪ್ಪಿಗೆ ಕೊಡಲಿಲ್ಲ. ನಾನೆಂದೆ, 'ಇಂದು ವಿಶುದ್ಧ ವಾರವಲ್ಲವೆ?'

''ಅದು ಅವನಿಗೆ ಅರ್ಥವಾಯಿತು. ಅಂದು ಅವನು ಜಗನ್ಮಾತೆಯ ಪೂಜೆ ಮಾಡಿಸಿದ. ಮರುದಿನ ತಿಂಗಳ ಮೊದಲ ದಿನ; ಅಂದು ಕೂಡ ದಧಿಕರ್ಮ ಮಾಡು ಅಂತ ಹೇಳಲಾಗಲಿಲ್ಲ—ಅಂದು ಅಗಸ್ತ್ಯಯಾತ್ರೆಯ[೪] ದಿನವಾಗಿತ್ತು. ಅದರ ಮರುದಿನ ವಿಸರ್ಜನೆ ಮಾಡಲಾಯಿತು. ಅಂದಿನಿಂದ ಜಗನ್ಮಾತೆ ಇಲ್ಲಿ ಮೂರು ದಿನಗಳ ಕಾಲ ಪೂಜೆ ಸ್ವೀಕರಿಸಿಕೊಂಡು ಬರುತ್ತಿದ್ದಾಳೆ.''

ಈ ಬಾರಿ ನಾನು ಜಯರಾಮಬಾಟಿಯಿಂದ ಮರಳಿ ಬಂದ ಮೇಲೆ, ಶ್ರೀಮಾತೆ ಉತ್ಸುಕತೆಯಿಂದ ಪೂಜೆಯ ವಿಷಯವನ್ನೆಲ್ಲ ಕೇಳಿ ತಿಳಿದುಕೊಂಡರು.

ಇದಾದ ಕೆಲವು ದಿನಗಳ ನಂತರ ಶ್ರೀಮಾತೆ ಪುರೀಧಾಮಕ್ಕೆ ಹೋಗುವ ವಿಷಯ ಕೇಳಿ ಬಂತು. ಅಲ್ಲಿಗೆ ಹೋಗುವುದು ನಿಶ್ಚಯವಾದ ಮೇಲೆ ಎರಡು ದಿನ ಹಗಲುಹೊತ್ತು ಸಾಮಾನುಗಳನ್ನು ಖರೀದಿಸಿ, ರಾತ್ರಿ ಅವನ್ನೆಲ್ಲ ಪ್ಯಾಕ್ ಮಾಡಿದೆವು.

ಶ್ರೀಮಾತೆಯವರೊಂದಿಗೆ ಅವರ ಚಿಕ್ಕಪ್ಪ, ರಾಧು, ಸಣ್ಣತ್ತೆ, ನಟಿಯ ತಾಯಿ, ಚುನಿಬಾಬುಗಳ ಪತ್ನಿ (ಬಲರಾಮಬಾಬುವಿನ ಮನೆಯ ಪಶ್ಚಿಮ ಭಾಗದಲ್ಲಿದ್ದ ಚುನಿಲಾಲ್ ಬಸು ಶ್ರೀರಾಮಕೃಷ್ಣರ ಭಕ್ತನಾಗಿದ್ದ), ಕುಸುಮ[೫], ಗೋಲಾಪ್ ಮಾ ಹಾಗೂ ಲಕ್ಷ್ಮೀದೀದಿ ಹೊರಟರು. ಗಂಡಸರಲ್ಲಿ ಬಾಬುರಾಮ ಮಹಾರಾಜ್ (ಸ್ವಾಮಿ ಪ್ರೇಮಾನಂದ) ಹಾಗೂ ನಾನು ಇದ್ದೆವು. ಎರಡನೇ ದರ್ಜೆಯ ರೈಲುಗಾಡಿಯಲ್ಲಿ ರಿಸರ್ವ್ ಮಾಡಲಾಗಿತ್ತು; ಅದರಲ್ಲಿ ಮಹಿಳೆಯರೆಲ್ಲರೂ ಪ್ರಯಾಣ ಮಾಡಿದರು. ಗಂಡಸರು ನಾವು ಮೂರು ಜನ ಇಂಟರ್‌ಕ್ಲಾಸ್‌ನಲ್ಲಿ ಹೊರಟೆವು. ಬಾಬುರಾಮ ಮಹಾರಾಜರ ಸಣ್ಣ ತಮ್ಮ ಶಾಂತಿರಾಮಬಾಬು ಹಾಗೂ ಗಣೇಂದ್ರನಾಥ ನಮ್ಮನ್ನೆಲ್ಲ ಹೌರಾ ಸ್ಟೇಶನ್‌ಗೆ ಕರೆತಂದು, ಟ್ರೇನ್ ಹತ್ತಿಸಿಕೊಟ್ಟರು. ರಾತ್ರಿಯಿಡೀ ರೈಲಿನಲ್ಲಿದ್ದುಕೊಂಡು, ಮರುದಿನ ಬೆಳಿಗ್ಗೆ ಪುರೀಧಾಮವನ್ನು ತಲುಪಿದೆವು. ಅಲ್ಲಿ ನಮಗೆ ತಂಗಲು ದೊಡ್ಡ ರಸ್ತೆಯ ಅಂದರೆ ಪುರೀ ದೇವಸ್ಥಾನದ ರಸ್ತೆಯ ಪಕ್ಕದಲ್ಲೇ ಇದ್ದ 'ಕ್ಷೇತ್ರವಾಸಿಗಳ ಮಠ'ವನ್ನು (ಬಲರಾಮಬಾಬುಗಳ ನಿವಾಸ) ತೆರೆದಿಟ್ಟಿದ್ದರು. ಬಾಬುರಾಮ ಮಹಾರಾಜ್ ಸಮುದ್ರ ತೀರದಲ್ಲಿದ್ದ ಬಲರಾಮಬಾಬುವಿನ ಇನ್ನೊಂದು ಮನೆ 'ಶಶಿನಿಕೇತನ'ದಲ್ಲಿ ಉಳಿದುಕೊಂಡರು.

ಪುರಿಯಲ್ಲಿ ಬಂದಿಳಿದ ಶ್ರೀಮಾತೆ, ಬರಿಗಾಲಿನಲ್ಲಿ ದೇವಸ್ಥಾನಕ್ಕೆ ದೇವರ ದರ್ಶನ ಮಾಡಲು ಹೋದರು. ಮೊದಲೇ ಬಲರಾಮ ಬಾಬುವಿನ ಸುಪುತ್ರ ರಾಮಕೃಷ್ಣ ಬಸು (ನಾವು ಅವನನ್ನು 'ರಾಮ'ನೆಂದು ಕರೆಯುತ್ತಿದ್ದೆವು) ಎಲ್ಲ ವ್ಯವಸ್ಥೆಗಳನ್ನೂ ಮಾಡಿದ್ದ. ಅವನು ಆ ಪ್ರದೇಶದ ಜಮೀನ್ದಾರನಾಗಿದ್ದ. ಶ್ರೀಮಾತೆ ಮಂದಿರವನ್ನು ಪ್ರವೇಶಿಸುತ್ತಿದ್ದಂತೆಯೇ ಗರ್ಭಗುಡಿಯ ಪ್ರದೇಶವನ್ನು ತೆರವುಗೊಳಿಸಲಾಯಿತು. ಶ್ರೀಮಾತೆ ಪ್ರವೇಶ ಮಾಡಿದೊಡ

---

೧ ನಿಜವಾಗಿ ನಾಲ್ಕನೆಯ ತಮ್ಮ. ಶ್ರೀಮಾತೆಯವರ ಎರಡನೆಯ ತಮ್ಮ ಉಮೇಶಚಂದ್ರ ಸಣ್ಣ ವಯಸ್ಸಿನಲ್ಲೇ ತೀರಿಕೊಂಡಿದ್ದ. ಆದ್ದರಿಂದ ನಾಲ್ಕನೆಯ ತಮ್ಮನನ್ನು ಮೂರನೆಯ ತಮ್ಮನೆಂದು ಪರಿಗಣಿಸಲಾಗಿದೆ. *–ಸಂ.*

೨ ಅವನ ನಿಜವಾದ ಹೆಸರು ವರದಾಪ್ರಸಾದ ಎಂದು. *(–ಸಂ.)*

೩ ಈ ಆಚರಣೆ ಯಾವುದೇ ವೈದಿಕ ಕ್ರಿಯೆಯ ಸಮಾಪ್ತಿಯಾಗಿರುತ್ತದೆ.

೪ ಅಗಸ್ತ್ಯಮುನಿ ತಿಂಗಳ ಮೊದಲ ದಿನದಂದು ಯಾತ್ರೆ ಹೊರಟಿದ್ದ; ಅವನು ಮರಳಿ ಬಂದಿರಲಿಲ್ಲ. ಆದ್ದರಿಂದ ತಿಂಗಳ ಮೊದಲ ದಿನ ಅಶುಭವೆಂದು ನಂಬಿಕೆ.

೫ ಕುಸುಮಕುಮಾರಿ ದೇವಿ. ಅವಳು ಸ್ವಾಮೀಜಿ ಸಂಪರ್ಕದಲ್ಲಿದ್ದಳು. ಆಕೆ ಬಾಲವಿಧವೆ; ಕಾಶಿಯಲ್ಲಿದ್ದಳು. ಸ್ವಾಮಿ ಅಚಲಾನಂದ (ಕೇದಾರ ಬಾಬಾ)ರೊಂದಿಗೆ ಆಕೆ ಜಯರಾಮಬಾಟಿಗೆ ಬಂದು, ಶ್ರೀಮಾತೆಯವರ ಬಳಿಗೆ ಬಂದಳು. ಅನಂತರ ಆಕೆ ಶ್ರೀಮಾತೆಯವರ ಸೇವೆಯನ್ನು ಮಾಡಿದಳು. ಆಕೆ ಗೋಪಾಲೇರ್ ಮಾ-ಳಿಂದ ಮಂತ್ರದೀಕ್ಷೆ ಪಡೆದಿದ್ದಳು. ಗೋಪಾಲೇರ್ ಮಾ ಪಾದಗಳ ಬಳಿ ಭಗಿನಿ ನಿವೇದಿತಾ ಕುಳಿತ ಭಾವಚಿತ್ರದಲ್ಲಿ, ಬೀಸಣಿಗೆ ಹಿಡಿದು ಗೋಪಾಲೇರ್ ಮಾ-ಳ ಹಿಂಭಾಗದಲ್ಲಿ ಕುಳಿತ ಮಹಿಳೆಯೇ ಕುಸುಮಕುಮಾರಿ ದೇವಿ. *(–ಸಂ.)*



ಪುರಿ ಜಗನ್ನಾಥನ ಮಂದಿರ

ನೆಯೇ ಮೊದಲು ನನ್ನ, ಅನಂತರ ತಮ್ಮ ಚಿಕ್ಕಪ್ಪನ ಹಣೆಯನ್ನು ದೇವರನ್ನು ಪ್ರತಿಷ್ಠಾಪಿಸಲಾಗಿದ್ದ ರತ್ನಪೀಠಕ್ಕೆ ಕೈಯಿಂದ ಮುಟ್ಟಿಸಿದರು. ಅನಂತರ ನನಗೆ ಹೇಳಿದರು: ''ಗುರು, ಇಷ್ಟದೇವತೆ ಎರಡನ್ನೂ ಒಂದೇ ಕಡೆ ನೋಡಬೇಕು.'' ಅನಂತರ ಉಳಿದವರೆಲ್ಲ ದರ್ಶನ ಮಾಡಿದರು. ಪ್ರತಿದಿನವೂ ದೇವಾಲಯದಿಂದ ನಮಗೆಲ್ಲರಿಗೂ ಮಹಾಪ್ರಸಾದ ಬರುತ್ತಿತ್ತು.

'ಕ್ಷೇತ್ರವಾಸಿಗಳ ಮಠ'ದ ಹೊರ ಕೋಣೆಯಲ್ಲಿ ಶ್ರೀಮಾತೆಯವರ ಚಿಕ್ಕಪ್ಪ, ನಾನು ಹಾಗೂ ಒಬ್ಬ ಕೆಲಸದವನು ಇದ್ದೆವು. ಒಳಗಿನ ಮನೆಯಲ್ಲಿ ಮಹಿಳೆಯರಿಗೆ ತಂಗಲು ವ್ಯವಸ್ಥೆಯಾಯಿತು. ಅಲ್ಲೇ ಒಬ್ಬ ಹಮಾಲಿ ಕೂಡ ಉಳಿದುಕೊಂಡ. ಮೂರು ದಿನಗಳಿಂದ ತುಂಬಾ ಶ್ರಮವಾಗಿತ್ತು; ರಾತ್ರಿ ಹೊತ್ತು ಜಾಗರಣೆ ಮಾಡಬೇಕಾಗಿತ್ತು ಕೂಡ. ಇದರಿಂದ ಎಷ್ಟೊಂದು ಬಳಲಿದ್ದೆವೆಂದರೆ, ಮೊದಲ ದಿನ ರಾತ್ರಿಹೊತ್ತು ಹತ್ತಿದ ಗಾಢನಿದ್ರೆಗೆ, ಯಾರೋ ಕಳ್ಳ ಬಂದು ನಮ್ಮ ಕೋಣೆಯಿಂದ ಚಿಕ್ಕಪ್ಪನ ಹಾಗೂ ನನ್ನ ಬಟ್ಟೆಬರೆ ಇತ್ಯಾದಿ ಕದ್ದುಕೊಂಡು ಹೋದರೂ ನಮಗೆ ಗೊತ್ತಾಗಲಿಲ್ಲ. ಚಿಕ್ಕಪ್ಪ ತುಸು ಅಫೀಮು ಸೇವಿಸುತ್ತಿದ್ದ. ಬೆಳಿಗ್ಗೆ ಆತನಿಗೆ ನಿದ್ರಾಭಂಗವಾಗಿ, ಕೋಣೆಯ ಬಾಗಿಲನ್ನು ತೆರೆದು ಬಂದು ನೋಡಿದ, ಕಪಾಟಿನಲ್ಲಿ ಬಟ್ಟೆಬರೆ ಇಲ್ಲದ್ದನ್ನು ನೋಡಿ ಗದ್ದಲವೆಬ್ಬಿಸಿದ. ಅವನ ಗದ್ದಲದಿಂದ ನಮಗೆ ನಿದ್ರಾಭಂಗವುಂಟಾಯಿತು. ಬೇಗನೆ ನಾವು ಒಳಗಿನ ಮನೆಗೆ ಹೋಗಿ ನೋಡಿದೆವು. ಅಲ್ಲಿನ ಕೋಣೆಗಳಿಗೆಲ್ಲ ಒಳಗಿನಿಂದ ಅಗಳಿ ಹಾಕಲಾಗಿತ್ತು. ಅಲ್ಲೇನೂ ನಡೆದಿಲ್ಲ; ಕೇವಲ ನಮ್ಮಲ್ಲಿ ಮಾತ್ರ ಕಳ್ಳತನವಾಗಿತ್ತು. ಕಳ್ಳತನದ ವಾರ್ತೆ 'ಶಶಿನಿಕೇತನ' ದಲ್ಲಿದ್ದ ಬಾಬುರಾಮ ಮಹಾರಾಜರು ಹಾಗೂ ರಾಮನಿಗೆ ತಲುಪಿತು. ಅವರು ಕೂಡಲೇ ಬಂದರು; ಪೋಲಿಸ್ ಸ್ಟೇಶನ್ನಿನಲ್ಲಿ ಅದನ್ನು ದಾಖಲಿಸಲಾಯಿತು. ಪೋಲಿಸರು ಹುಡುಕುವ ಪ್ರಯತ್ನ ಮಾಡಿದರು. ಎರಡು ಮೈಲಿ ದೂರದಲ್ಲೇ ಕಳ್ಳನನ್ನು ಮಾಲು ಸಮೇತ ಹಿಡಿದರು. ತಕ್ಕ ಸಮಯದಲ್ಲಿ ಕೋರ್ಟಿನಲ್ಲಿ ಸಾಕ್ಷಿಹೇಳಿ, ಬಟ್ಟೆಬರೆಗಳನ್ನು ಮರಳಿ ತಂದೆವು.

ಪ್ರತಿದಿನ ಬೆಳಿಗ್ಗೆ ನಾವು ಶ್ರೀಮಾತೆಯವರೊಂದಿಗೆ ಶ್ರೀ ಜಗನ್ನಾಥನ ದರ್ಶನ ಮಾಡಲು ಹೋಗುತ್ತಿದ್ದೆವು; ಸಾಯಂಕಾಲ ಆರತಿ ಕೂಡ ನೋಡುತ್ತಿದ್ದೆವು. ಒಂದು ದಿನ ಶ್ರೀಮಾತೆಯವರ ಇಚ್ಛೆಯಂತೆ 'ಕ್ಷೇತ್ರವಾಸಿಗಳ ಮಠ'ದಲ್ಲಿ ಹರಿಕಥೆಗೆ ಏರ್ಪಾಡು ಮಾಡಿದೆವು. ಪಂಡಾನೊಬ್ಬ ಬಂದು ಕಾವ್ಯದಿಂದ ಶ್ರೀ ಜಗನ್ನಾಥನ ಇತಿಹಾಸ ಮತ್ತು ಮಾಹಾತ್ಮೆಯನ್ನು ವಾಚನ ಮಾಡಿದ. ಅಂದು ಸುಮಾರು ಐವತ್ತು ಮಂದಿ ಪಂಡಾಗಳಿಗೆ ಅನ್ನಸಂತರ್ಪಣೆ ಮಾಡಲಾಯಿತು.

ಅಲ್ಲಿ ಶ್ರೀಮಾತೆಯವರ ಕಾಲಿನಲ್ಲಿ ಒಂದು ಗುಳ್ಳೆಯೆದ್ದಿತು. ಅದು ಅವರಿಗೆ ತುಂಬಾ ನೋವನ್ನುಂಟುಮಾಡುತ್ತಿತ್ತು. ಅದು ಚೆನ್ನಾಗಿ ಮಾಗಿತ್ತು, ಆದರೆ ಶ್ರೀಮಾತೆ ಅದನ್ನು ಒಡೆಯಲು ಬಿಡುತ್ತಿರಲಿಲ್ಲ. ಅವಸ್ಥೆ ಹೀಗಿದ್ದಾಗ, ಒಂದು ದಿನ ಅವರು ದೇವಾಲಯದಲ್ಲಿ ಆರತಿ ನೋಡುತ್ತಿದ್ದರು. ಆಗ ಹಿಂದಿನಿಂದ ಯಾತ್ರಿಗಳ ಜನಜಂಗುಳಿ ಎಷ್ಟಿತ್ತೆಂದರೆ, ನಮ್ಮ ಆವರಣವನ್ನು ಅವರು ಭೇದಿಸಿಬಿಟ್ಟರು. ಶ್ರೀಮಾತೆಯವರಿಗೆ ಗುಳ್ಳೆಯೆದ್ದಿದ್ದ ಸ್ಥಳಕ್ಕೇ ಏಟು ಬಿದ್ದು, ಅವರು ನೋವಿನಿಂದ ಕಿರಿಚಿಕೊಂಡರು.

ಈ ಘಟನೆಯನ್ನು ಕೇಳಿದ ಬಾಬುರಾಮ ಮಹಾರಾಜರು ಮರುದಿನ ಬೆಳಿಗ್ಗೆ ಒಬ್ಬ ಯುವಕ ಡಾಕ್ಟರ್‌ನನ್ನು ಕರೆದುಕೊಂಡು ಬಂದರು. ನಾವು ಮೊದಲೇ ಅವನಿಗೆ ತಿಳಿಸಿದ್ದಂತೆ, ಶ್ರೀಮಾತೆಗೆ ಪ್ರಣಾಮ ಮಾಡುವಾಗ ಅವನು ಅವರ ಗುಳ್ಳೆಯನ್ನು ಒಡೆದು, ''ಅಮ್ಮಾ ನನ್ನ ಅಪರಾಧವನ್ನು ಗಣನೆಗೆ ತೆಗೆದುಕೊಳ್ಳಬೇಡಿ'' ಎನ್ನುತ್ತ ಹೊರಟುಹೋದ. ಕೂಡಲೇ ನಾವೆಲ್ಲ ಎರಡೂ ಕೈಗಳಿಂದ ಅವರ ಕಾಲಿನ ಗುಳ್ಳೆಯನ್ನು ಒತ್ತಿದೆವು; ಅದರ ಗಂಟು ಹೊರಬಂತು. ಶ್ರೀಮಾತೆ ಆಗ ಉತ್ತರೀಯವನ್ನು ಹೊದ್ದುಕೊಂಡಿದ್ದರು. ಡಾಕ್ಟರರ ಕೆಲಸವನ್ನೆಲ್ಲ ಅವರು ನೋಡಿರಲಿಲ್ಲ. ಬಾಬುರಾಮ ಮಹಾರಾಜರು ಹತ್ತಿರ ಬರಲಿಲ್ಲ, ಮನೆಯ ಹೊರಭಾಗದಲ್ಲಿ ನಿಂತಿದ್ದರು. ಡಾಕ್ಟರರನ್ನು ಕಳುಹಿಸಿ ಕೊಡಲು ಅವರು ಹೊರಟು ಹೋದರು.

ಶ್ರೀಮಾತೆ ಕೋಪದಿಂದ ಚೆನ್ನಾಗಿ ಬಯ್ಯತೊಡಗಿದರು. ಅದನ್ನು ನೋಡಿ ನಾನಂದೆ: ''ಅಮ್ಮಾ, ನನ್ನದೇ ತಪ್ಪು. ಶಾಪ ಹಾಕುವುದಿದ್ದರೆ ನನಗೆ ಹಾಕಿ.'' ಅವರು ನನ್ನನ್ನು ಚೆನ್ನಾಗಿ ಬೈದರು, ಆದರೆ ಶಾಪ ಕೊಡಲಿಲ್ಲ. ಮೊದಲೇ ಸಂಗ್ರಹಿಸಿಟ್ಟಿದ್ದ ಬೇವಿನೆಲೆಯ ನೀರಿನಿಂದ ಗುಳ್ಳೆಯನ್ನು ಚೆನ್ನಾಗಿ ತೊಳೆದು, ಪಟ್ಟಿ ಕಟ್ಟಿದಾಗ ಅವರಿಗೆ ತುಸು ನೆಮ್ಮದಿಯೆನಿಸಿತು. ಉತ್ತರೀಯವನ್ನು ತೆಗೆದೆಸೆದು, ಕಾಲುಚಾಚಿ ಕುಳಿತು, ''ಓ! ತುಸು ನೆಮ್ಮದಿಯಾಯಿತು'' ಎಂದರು. ಮತ್ತೇನೋ ನೆನಪಿಸಿಕೊಂಡರು, ಅರೆಕ್ಷಣ ಮೊದಲು ಯಾರನ್ನು ಚೆನ್ನಾಗಿ ಬೈದಿದ್ದರೋ, ಆ ಶಿಷ್ಯನನ್ನೇ ಈಗ ಕೆನ್ನೆಹಿಂಡಿ ಆದರಿಸತೊಡಗಿದರು. ಅವರ ಆ ಬೈಗುಳ ಹಾಗೂ ಪ್ರೀತಿ ಇವನ್ನು ಆ ಶಿಷ್ಯ ತನ್ನ ಜೀವನದಲ್ಲಿ ಎಂದಿಗೂ ಮರೆಯಲಾರ.

*(ಮುಂದುವರಿಯುವುದು)*

# ತೈತ್ತಿರೀಯ ಉಪನಿಷತ್ತಿನ ವೈಶಿಷ್ಟ್ಯ

ಡಾ. ವಿ. ಶ್ರೀಮತಿ

ವೈದಿಕ ಸಾಹಿತ್ಯದಲ್ಲಿ ಶಿಖರಪ್ರಾಯವಾಗಿರುವ ಉಪನಿಷತ್ತುಗಳಲ್ಲಿ ಅತ್ಯಂತ ಪ್ರಸಿದ್ಧವಾದ ಉಪನಿಷತ್ತೇ ತೈತ್ತಿರೀಯ ಉಪನಿಷತ್ತು. ಇದರಲ್ಲಿ ಬರುವ ಬ್ರಹ್ಮತತ್ತ್ವ, ಆನಂದಮೀಮಾಂಸೆಗಳಷ್ಟೇ ಅಲ್ಲ; ಶಿಕ್ಷೆ, ವಿದ್ಯಾಭ್ಯಾಸ, ಸಾಮಾಜಿಕ ರೀತಿನೀತಿಗಳು ಪ್ರಾಚೀನ ಭಾರತದ ಸಾಂಸ್ಕೃತಿಕ, ನೈತಿಕ ಬದುಕಿನ ಒಳನೋಟವನ್ನು ನೀಡುತ್ತವೆ. ಈ ಉಪನಿಷತ್ತನ್ನು ಕುರಿತು ಇಲ್ಲಿ ವಿವರಿಸಿರುವ ಲೇಖಕಿ ಸಂಸ್ಕೃತ ಉಪನ್ಯಾಸಕರು. ಅವರು ಧರ್ಮ, ಸಂಸ್ಕೃತಿ, ಶಾಸ್ತ್ರ ವಿಚಾರವಾಗಿ ಅನೇಕ ಉತ್ತಮ ಗ್ರಂಥಗಳನ್ನು ರಚಿಸಿ, ಪ್ರಕಟಿಸಿದ್ದಾರೆ.



ಕೃಷ್ಣ ಯಜುರ್ವೇದಕ್ಕೆ ಸೇರಿರುವುದು ತೈತ್ತಿರೀಯ ಉಪನಿಷತ್ತು. ತೈತ್ತಿರೀಯ ಆರಣ್ಯಕದ ಏಳು, ಎಂಟು ಹಾಗೂ ಒಂಬತ್ತನೆಯ ಅಧ್ಯಾಯಗಳಾದ ಶೀಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿಗಳೇ ತೈತ್ತಿರೀಯ ಉಪನಿಷತ್ ಎನಿಸಿಕೊಂಡಿವೆ.

ಎಲ್ಲ ಉಪನಿಷತ್ತುಗಳೂ ಪ್ರಧಾನವಾಗಿ ಬ್ರಹ್ಮ ಮತ್ತು ಆತ್ಮ ಎಂಬ ಎರಡು ವಿಷಯಗಳನ್ನು ಕುರಿತು ಚರ್ಚಿಸಿವೆ. ಉಪನಿಷತ್ತುಗಳ ತತ್ತ್ವವನ್ನರಿಯಬೇಕಾದರೆ ಈ ಎರಡು ವಸ್ತುಗಳ ಅರಿವು, ಜ್ಞಾನ ಅತ್ಯಾವಶ್ಯಕವಾದುದು. ಅಂತೆಯೇ ತೈತ್ತಿರೀಯ ಉಪನಿಷತ್ತೂ ಸಹ ಬ್ರಹ್ಮ ಮತ್ತು ಆತ್ಮ ಜಿಜ್ಞಾಸೆಯನ್ನು ಮಾಡಿದೆ. ಅದರೊಡನೆ ತನ್ನದೇ ಆದ ವೈಶಿಷ್ಟ್ಯತೆಗಳಿಂದಾಗಿ ವಿಶೇಷವಾಗಿ ಗಮನ ಸೆಳೆಯುತ್ತದೆ ಈ ಉಪನಿಷತ್ತು.

ಕೇವಲ ಅಧ್ಯಾತ್ಮ ತತ್ತ್ವದಲ್ಲಿ ನಿಲ್ಲದೆ, ಸಾಮಾಜಿಕ ಬದುಕಿನ ರೀತಿ ನೀತಿಗಳನ್ನೂ ತಿಳಿಸಿ ಜನರಿಗೆ ಮಾರ್ಗದರ್ಶನವನ್ನು ನೀಡಿರುವುದು ಲೌಕಿಕ ಬದುಕಿಗೆ ನೀಡಿರುವ ಮಹತ್ವವನ್ನು ಸೂಚಿಸುತ್ತದೆ. ಲೌಕಿಕ ಜೀವನ ಪರಿಶುದ್ಧವಾಗಿದ್ದರೆ, ಸ್ವಾರ್ಥರಹಿತವಾಗಿದ್ದರೆ ಅಧ್ಯಾತ್ಮ ಸಾಧನೆ ಸುಲಭವಾಗುತ್ತದೆ ಎಂಬ ತತ್ತ್ವ ಇಲ್ಲಿ ಅಡಕವಾಗಿದೆ.

ಸ್ವರಸಹಿತ ಉಚ್ಚರಿಸಲು ತೈತ್ತಿರೀಯ ಉಪನಿಷತ್ತು ಅತ್ಯಂತ ಸೂಕ್ತವಾಗಿದೆ. ಉದಾತ್ತ, ಅನುದಾತ್ತ, ಸ್ವರಿತಾದಿ ಸ್ವರಸ್ಥಾನಗಳನ್ನು ಸಂಪೂರ್ಣ ಉಪನಿಷತ್ತಿಗೆ ನಿರ್ದೇಶಿಸಿರುವುದು ವಿಶೇಷ. ಬೇರೆ ಯಾವ ಉಪನಿಷತ್ತನ್ನೂ ಈ ರೀತಿ ಸ್ವರಸಹಿತ ಸಂಪೂರ್ಣವಾಗಿ ಉಚ್ಚರಿಸುವುದು ಕಷ್ಟ.

ತೈತ್ತಿರೀಯ ಉಪನಿಷತ್ತು ಪ್ರಾರಂಭವಾಗುವ ರೀತಿಯಿಂದಲೇ ತನ್ನ ವೈಶಿಷ್ಟ್ಯತೆಯನ್ನು ಮೆರೆಯುತ್ತದೆ. ಒಂದು ವಾಕ್ಯದ ತತ್ತ್ವವನ್ನೂ, ಅದರ ಅರ್ಥವನ್ನೂ ಸರಿಯಾಗಿ ತಿಳಿಯಬೇಕಾದರೆ ಆ ವಾಕ್ಯದಲ್ಲಿರುವ ಪದಗಳ ಉಚ್ಚಾರಣೆಯ ಕ್ರಮ ಗಮನಾರ್ಹವಾದುದು. ಆದ್ದರಿಂದ ಈ ರೀತಿ ಉಚ್ಚಾರಣೆಗೆ ಆವಶ್ಯಕವಾದ ವಿಷಯಗಳ ನಿರೂಪಣೆಯಿಂದಲೇ ಈ ಉಪನಿಷತ್ತು ಪ್ರಾರಂಭವಾಗುತ್ತದೆ.

ಗುರು-ಶಿಷ್ಯರಿಬ್ಬರೂ ಸೇರಿ ಶಾಂತಿಮಂತ್ರವನ್ನು ಪಠಿಸಿದ ನಂತರ 'ಶೀಕ್ಷಾಂ ವ್ಯಾಖ್ಯಾಸ್ಯಾಮಃ... 'ಎಂದು ಮುಖ್ಯ ವಿಷಯ ಪ್ರಾರಂಭವಾಗುತ್ತದೆ. ಮಂತ್ರಗಳಿಗೆ ಉಚ್ಚಾರಣೆಯೇ ಪ್ರಧಾನ. ಬರವಣಿಗೆಯ ಸೌಕರ್ಯವು ಇಲ್ಲದಿದ್ದರಿಂದ ಗುರುವಿನ ಬಾಯಿಯಿಂದ ಬಂದ ಉಪದೇಶವನ್ನು ಶಿಷ್ಯನು ತನ್ನ ಕಿವಿಯ ಮೂಲಕ ಸರಿಯಾಗಿ ಕೇಳಿಸಿಕೊಂಡು, ಸೂಕ್ತವಾಗಿ ಉಚ್ಚರಿಸ ಬೇಕಿತ್ತು. ಉಚ್ಚಾರಣೆಯು ವ್ಯತ್ಯಾಸವಾದರೆ ಅರ್ಥವು ಹೊಂದುವು ದಿಲ್ಲ. ಅರ್ಥವನ್ನರಿಯದೆ ಉಪಾಸನೆಯನ್ನು ಮಾಡುವುದಕ್ಕಾ ಗಲೀ, ತತ್ತ್ವವನ್ನು ಅರಿಯುವುದಕ್ಕಾಗಲೀ ಸಾಧ್ಯವಾಗುವುದಿಲ್ಲ. ಆದ್ದರಿಂದ ಉಚ್ಚರಿಸುವ ಕ್ರಮಕ್ಕೆ ಹೆಚ್ಚಿನ ಮಹತ್ವವನ್ನು ನೀಡಿ ವರ್ಣ, ಸ್ವರ, ಮಾತ್ರೆ, ಬಲ, ಸಾಮ ಮುಂತಾಗಿ ಉಚ್ಚಾರಣೆಗೆ ಅವಶ್ಯವಾದ ವಿಷಯಗಳೇ ಇಲ್ಲಿ ಪ್ರಾರಂಭದಲ್ಲಿ ಹೇಳಲ್ಪಟ್ಟಿವೆ.

ಒಂದು ತತ್ತ್ವವನ್ನರಿಯಬೇಕಾದರೆ ಆ ವಿಷಯದ ಜ್ಞಾನ ವನ್ನು ತಿಳಿದಿರುವ ವ್ಯಕ್ತಿ ಅಂದರೆ ಗುರು; ಆ ಜ್ಞಾನವನ್ನು ತಿಳಿಯ ಬಯಸುವ ವ್ಯಕ್ತಿ ಅಂದರೆ ಶಿಷ್ಯ—ಇಬ್ಬರೂ ಮುಖ್ಯರಾಗುತ್ತಾರೆ. ವಿದ್ಯೆಯನ್ನು ಹೇಳಿಕೊಡುವಾಗ ಅಥವಾ ಕಲಿಯುವಾಗ, ದೇಹ -ಮನಸ್ಸು-ಪರಿಸ್ಥಿತಿಗಳೆಲ್ಲವೂ ಸುಸ್ಥಿತಿಯಲ್ಲಿರಬೇಕು. ದೇಹ ಪೋಷಣೆಗೆ ಅಗತ್ಯವಾದ ಅಶನ-ವಸನಗಳೂ ಅದಕ್ಕೆ ಅವಶ್ಯವಾದ ಹಣವೂ ಇಲ್ಲಿ ಅಡಕವಾಗಿವೆ. ಹಾಗಾಗಿ ಗುರುವು ತನ್ನ ಸ್ಥಿತಿಯು ಉತ್ತಮವಾಗಿರಲಿ, ಯೋಗ್ಯರಾದ ಅನೇಕ ವಿದ್ಯಾರ್ಥಿಗಳು ತನ್ನ ಲ್ಲಿಗೆ ಬರುವಂತಾಗಲಿ ಎಂದು ಪ್ರಾರ್ಥಿಸುತ್ತಾರೆ. ಕಲಿತ ವಿದ್ಯೆ ಸಾರ್ಥಕವಾಗಬೇಕಾದರೆ ಅದನ್ನು ಉತ್ತಮ ಶಿಷ್ಯರಿಗೆ ನೀಡಬೇಕು. ಹಾಗಾಗಿ ಶಿಷ್ಯರು ಬೇಕು, ಆ ಶಿಷ್ಯರನ್ನು ಸಲಹಲು ಅಗತ್ಯವಾದ ವ್ಯವಸ್ಥೆಗಾಗಿ ಆಹಾರಾದಿ ಸೌಲಭ್ಯಗಳು ಬೇಕು. ಆಗ ಮಾತ್ರ ಗುರುವು ಪೂರ್ಣಮನಸ್ಸನ್ನು ವಿದ್ಯಾದಾನದಲ್ಲೇ ತೊಡಗಿಸಬಲ್ಲ. **'ಶರೀರಮಾದ್ಯಂ ಖಲು ಧರ್ಮಸಾಧನಮ್'** ಎಂಬ ಮಾತಿನಂತೆ ಧರ್ಮಾಚರಣೆಯಲ್ಲಿ ತೊಡಗಲು ಶರೀರವನ್ನೂ ಪೋಷಿಸಬೇಕಾ ಗುತ್ತದೆ. ಅದಕ್ಕಾಗಿಯೇ ಗುರುವು—**'ವಾಸಾಗ್ಂಸಿ ಮಮ ಗಾವಶ್ಚ ಅನ್ನ ಪಾನೇ ಚ ಸರ್ವದಾ..', 'ಆಮಾಯಂತು ಬ್ರಹ್ಮಚಾರಿಣಃ ಸ್ವಾಹಾ ...'** ಮುಂತಾಗಿ ಪ್ರಾರ್ಥಿಸುವರು. ಎಲ್ಲ ಕಡೆಗಳಿಂದಲೂ ಬ್ರಹ್ಮಚಾರಿಗಳು ನನ್ನಲ್ಲಿಗೆ ಬರಲಿ ಎಂಬ ಪ್ರಾರ್ಥನೆಯಲ್ಲಿ ಆ ಗುರುವಿನ ವಿಶಾಲ ಮನೋಭಾವನೆಯನ್ನು ಕಾಣಬಹುದು. ಒಂದು ಜಾತಿ, ಪಂಥ, ಪ್ರದೇಶ ಎಂಬ ಸಂಕುಚಿತ ಭಾವನೆಯಿಲ್ಲದೆ ಎಲ್ಲ ಕಡೆಗಳಿಂದಲೂ ಯೋಗ್ಯ ಶಿಷ್ಯರನ್ನು ಆಹ್ವಾನಿಸುವುದು 'ವಸುಧೈವ ಕುಟುಂಬಕಮ್' ಎಂಬ ಕಲ್ಪನೆಗೆ ಅನುಸಾರವಾಗಿಯೇ ಇದೆ.

ಬ್ರಹ್ಮಚರ್ಯಾಶ್ರಮವು ಮುಂದಿನ ಮೂರು ಆಶ್ರಮಗಳಿಗೂ ತಳಹದಿಯಾಗಿರುವುದರಿಂದ ಅಲ್ಲಿ ಶಿಷ್ಯನಿಗೆ ಸೂಕ್ತ ಮಾರ್ಗ ದರ್ಶನ ಅತ್ಯಾವಶ್ಯಕ. ವಿದ್ಯಾಭ್ಯಾಸವನ್ನು ಪೂರೈಸಿಕೊಂಡು, ಗುರುಕುಲದಿಂದ ಹೊರಬಂದು ಸಮಾಜದ ಮುಖ್ಯವಾಹಿನಿ ಯಲ್ಲಿ ಒಂದಾಗಿ, ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ತನ್ನ ಕರ್ತವ್ಯ ವನ್ನು ಸೂಕ್ತವಾಗಿ ನಿರ್ವಹಿಸುತ್ತಾ, ಜವಾಬ್ದಾರಿಯುತ ಯೋಗ್ಯ ಪ್ರಜೆಯಾಗಿ ಬಾಳಲು ಬೇಕಾದ ಸೂಕ್ತ ಮಾರ್ಗದರ್ಶನ ಗುರು ಗಳಿಂದ ಇಲ್ಲಿ ದೊರಕುತ್ತದೆ. ಶೀಕ್ಷಾವಲ್ಲಿಯ ಕೊನೆಯ ಭಾಗವಾದ ಹನ್ನೊಂದನೆಯ ಅನುವಾಕದಲ್ಲಿ ಆಶ್ರಮದಿಂದ ತೆರಳುವ ಶಿಷ್ಯ ನಿಗೆ ಗುರುವು ನೀಡುವ ಉಪದೇಶ ಅತ್ಯಂತ ಮಹತ್ವಪೂರ್ಣ ವಾದುದು. **'ಸತ್ಯಂ ವದ ಧರ್ಮಂ ಚರ...'** ಮುಂತಾಗಿ ಆ ಶಿಷ್ಯನು ಉತ್ತಮ ಗೃಹಸ್ಥನಾಗಿ ನಿರ್ವಹಿಸಬೇಕಾದ ಕರ್ತವ್ಯಗಳ ಬಗ್ಗೆ ಸ್ಪಷ್ಟ ಆದೇಶವನ್ನು ನೀಡುತ್ತಾರೆ. ಗುರುಹಿರಿಯರನ್ನು ಗೌರವದಿಂದ ಕಾಣುವುದು, ದಾನಕೊಡುವಾಗ ಇರಬೇಕಾದ ಶುದ್ಧ ಹಾಗೂ ವಿನಯ ಭಾವನೆ, ವಿಹಿತ ಕರ್ಮಗಳನ್ನಾಚರಿಸ ಬೇಕೆಂಬ ತಿಳುವಳಿಕೆ, ಅತಿಥಿ ಸತ್ಕಾರ—ಹೀಗೆ ಒಬ್ಬ ವ್ಯಕ್ತಿ ಆದರ್ಶ ಗೃಹಸ್ಥನಾಗಿ ಬಾಳಲು ಬೇಕಾದ ಉಪದೇಶ ಗುರುಗಳಿಂದ ಪ್ರಾಪ್ತ ವಾಗುತ್ತದೆ. ಒಂದು ಸಮಾಜ ಸುವ್ಯವಸ್ಥಿತವಾಗಿ ನಡೆಯಲು ಇದು ಇಂದಿಗೂ ಪ್ರಸ್ತುತವೇ ಆಗಿದೆ.

ಇಲ್ಲಿ ಹೇಳಿರುವ ಒಂದು ಮಾತು ಹೀಗಿದೆ:

**ಯಾನ್ಯಸ್ಮಾಕಗ್ಂ ಸುಚರಿತಾನಿ ।**
**ತಾನಿ ಸೇವಿತವ್ಯಾನಿ । ನೋ ಇತರಾಣಿ ... ।**

ಇದರರ್ಥ: 'ನಮ್ಮಲ್ಲಿ ಯಾವ ಒಳ್ಳೆಯ ಗುಣಗಳಿವೆಯೋ ಅದನ್ನು ನೀನು ಪಾಲಿಸಬೇಕು. ಬೇರೆ(ಕೆಟ್ಟ) ಗುಣಗಳನ್ನಲ್ಲ.'

ಉಪನಿಷತ್ತಿನ ಗುರು ಹೇಳುತ್ತಿರುವ ಮಾತಿದು. ಲೌಕಿಕ ವ್ಯಾಮೋಹವನ್ನು ಮೀರಿ ಆತ್ಮೋದ್ಧಾರದ ಮಾರ್ಗವನ್ನು ಶಿಷ್ಯ ರಿಗೆ ಉಪದೇಶಿಸುತ್ತಿರುವ ಶ್ರೇಷ್ಠ ಗುರುವಿನ ಬಾಯಿಯಿಂದ ಬರುವ ಉದಾತ್ತ ನುಡಿಯಿದು.

ಆಚಾರ-ವಿಚಾರಗಳ ವಿಷಯದಲ್ಲಿ ಸಂಶಯವುಂಟಾದರೆ ಆಗ ಜ್ಞಾನಿಗಳ ಸಲಹೆಯಂತೆ ನಡೆಯಬೇಕು. ಜ್ಞಾನಿಯಾದ ವನು ಯಾವುದೇ ಲೌಕಿಕ ಆಸೆ, ಆಮಿಷಗಳಿಗೆ ಮರುಳಾಗುವುದಿಲ್ಲ, ಸ್ವಾರ್ಥಕ್ಕೆ ಬಲಿಯಾಗುವುದಿಲ್ಲ, ಅಂತಹವರು ನೀಡುವ ಸಲಹೆ ವಿಶಾಲ ಭಾವನೆಯಿಂದ ಕೂಡಿ ಲೋಕೋದ್ಧಾರಕ್ಕಾಗಿಯೇ ಆಗಿ ರುತ್ತದೆ. ಅಂತಹವರ ನಡೆ-ನುಡಿಗಳು ಎಂದಿಗೂ ಧರ್ಮಮಾರ್ಗ ದಲ್ಲೇ ಇರುತ್ತದೆ.

ಎಂತಹವರ ಸಲಹೆಯನ್ನು ಪಡೆಯಬೇಕು ಎಂಬ ನೀತಿಯೂ ಇಲ್ಲಿ ಅಭಿವ್ಯಕ್ತವಾಗುತ್ತದೆ. ಇದು ಉಪನಿಷತ್ತಿನ ಋಷಿಗಳಿಗಿರುವ ವ್ಯಾವಹಾರಿಕ ಜ್ಞಾನವನ್ನೂ ಪ್ರಕಟಪಡಿಸುತ್ತದೆ.

ಒಬ್ಬ ಮನುಷ್ಯ ಸಂಪೂರ್ಣ ಆನಂದವನ್ನು ಹೊಂದಬೇಕಾದರೆ ಏನೇನು ಬೇಕಾಗಬಹುದು ಎಂಬುದನ್ನೂ ಇಲ್ಲಿ ವಿವೇಚಿಸಲಾಗಿದೆ.

**ಯುವಾ ಸ್ಯಾತ್ ಸಾಧು ಯುವಾಽಧ್ಯಾಯಕಃ।**
**ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ ।**
**ತಸ್ಯೇಯಂ ಪೃಥವೀ ಸರ್ವಾ ವಿತ್ತಸ್ಯ ಪೂರ್ಣಾಸ್ಯಾತ್।**
**ಸ ಏಕೋ ಮಾನುಷ ಆನಂದಃ ।**

'ವೇದಾಧ್ಯಯನ ಸಂಪನ್ನನೂ, ಉನ್ನತ ಆಸೆಯುಳ್ಳವನೂ, ದೃಢಶಾಲಿಯೂ, ಬಲಿಷ್ಠನೂ, ಸಕಲ ಸಂಪತ್ತನ್ನೂ ಒಳಗೊಂಡಿ

ರುವ ಪೃಥಿವಿಯನ್ನೆಲ್ಲ ಹೊಂದಿರುವವನೂ, ಯುವಕನೂ ಆಗಿರುವವನ ಆನಂದವೇ ಒಬ್ಬ ಮನುಷ್ಯನ ಆನಂದ.'

ಆದರೆ ಮನುಷ್ಯ ಜೀವನವೇ ಕ್ಷಣಿಕವಾಗಿರುವುದರಿಂದ ಈ ಆನಂದವು ಶಾಶ್ವತವಾಗಿರಲು ಸಾಧ್ಯವಿಲ್ಲ. ಉಪನಿಷತ್ತಿನ ಋಷಿಗಳು ಇಂತಹ ಲೌಕಿಕ, ಕ್ಷಣಿಕ ಆನಂದಕ್ಕೆ ಮರುಳಾಗುತ್ತಿರಲಿಲ್ಲ. ಇದನ್ನೂ ಮೀರಿದ ಶಾಶ್ವತ ಆನಂದದ ಅನ್ವೇಷಣೆಯೇ ಅವರ ಗುರಿಯಾಗಿತ್ತು. ಹಾಗಾಗಿ ಮನುಷ್ಯಾನಂದದಿಂದ ಪ್ರಾರಂಭಿಸಿ, ಮನುಷ್ಯಗಂಧರ್ವಾನಂದ, ದೇವ ಗಂಧರ್ವಾನಂದ – ಪಿತೃಗಳ ಚಿರಲೋಕ ಲೋಕಾನಂದ – ಅಜಾನಜ ದೇವಾನಂದ – ಕರ್ಮದೇವಾನಂದ – ಇಂದ್ರಾನಂದ – ಬೃಹಸ್ಪತ್ಯಾನಂದ – ಪ್ರಜಾಪತ್ಯಾನಂದ – ಬ್ರಹ್ಮಾನಂದದಲ್ಲಿ ಕೊನೆಗೊಳ್ಳುತ್ತದೆ.

ಮುಂದುಮುಂದಿನ ಸತ್ಯದ ಅರಿವಾದಂತೆ ಹಿಂದೆ ತಿಳಿದಿರುವುದು ಅಸತ್ಯ ಎಂದು ಗೋಚರಿಸುತ್ತದೆ. ಮುಂದಿನ ಅನ್ವೇಷಣೆಗೆ ಇದೇ ಪ್ರೇರಣೆಯನ್ನು ನೀಡುತ್ತದೆ. ಹಾಗಾಗಿಯೇ ನಶ್ವರವಾದ ಮನುಷ್ಯ ಆನಂದದಿಂದ ಪ್ರಾರಂಭಿಸಿ ಶಾಶ್ವತವಾದ ಬ್ರಹ್ಮಾನಂದದ ಹಂತದವರೆಗೂ ಏರಲು ಸಾಧ್ಯವಾಗುತ್ತದೆ. ಈ ಬ್ರಹ್ಮಾನಂದವೇ ಯೋಗಿಯು ಬಯಸುವ ಉತ್ಕೃಷ್ಟ ಸ್ಥಿತಿ.

ಆ ಬ್ರಹ್ಮನನ್ನು ಅರಿಯುವುದು ಹೇಗೆ ಎಂಬ ಕ್ರಮಗಳನ್ನು ವ್ಯವಸ್ಥಿತವಾಗಿ ಇಲ್ಲಿ ತಿಳಿಸಲಾಗಿದೆ. ಪ್ರಯತ್ನವಿಲ್ಲದೆ ಫಲಸಿದ್ಧಿಯಿಲ್ಲ. ನಮ್ಮ ಸ್ವಪ್ರಯತ್ನದಿಂದಲೇ ನಾವು ಎಲ್ಲವನ್ನೂ ಗಳಿಸಬೇಕು ಎಂಬುದು ಭೃಗುವಿನ ವೃತ್ತಾಂತದಿಂದ ಅರಿವಾಗುತ್ತದೆ. ತಪಸ್ಸೇ ಎಲ್ಲಕ್ಕೂ ಮೂಲ, ತಪಸ್ಸಿನಿಂದಲೇ ನಾವು ಜ್ಞಾನವನ್ನು ಪಡೆಯಬಹುದು. ಸ್ಥೂಲದಿಂದ ಸೂಕ್ಷ್ಮದೆಡೆಗೆ ಸಾಗುವ ಕ್ರಮ ಇಲ್ಲಿ ಸುವ್ಯಕ್ತ. ಅನ್ನಮಯ–ಪ್ರಾಣಮಯ–ಮನೋಮಯ – ವಿಜ್ಞಾನಮಯ – ಆನಂದಮಯ ಕೋಶಗಳನ್ನು ದಾಟಿ ಪರಬ್ರಹ್ಮನಲ್ಲಿ ಒಂದಾಗುವ ಕ್ರಮ, ಅದಕ್ಕಾಗಿ ಶಿಷ್ಯನನ್ನು ಮುನ್ನಡೆಸುವ ರೀತಿ ಅನನ್ಯ. ಶಿಷ್ಯನನ್ನು ಪ್ರಯತ್ನಶೀಲನನ್ನಾಗಿಸುವುದು ಉತ್ತಮ ಗುರುವಿನ ಲಕ್ಷಣ. ಆದರ್ಶ ಗುರುವಿನ ಉತ್ತಮ ಕಾರ್ಯಸಾಧನೆಯನ್ನು ನಾವಿಲ್ಲಿ ಗಮನಿಸಬಹುದು.

ಕೇವಲ ಬ್ರಹ್ಮಾನಂದದಲ್ಲೇ ನೆಲೆಸದೆ, ಲೌಕಿಕ ಜಗತ್ತನ್ನೂ ಇಲ್ಲಿ ಪರಿಶೀಲಿಸಲಾಗಿದೆ. ಅನ್ನದ ವಿಶೇಷ ಮಹತ್ವವನ್ನಿಲ್ಲಿ ತಿಳಿಸಲಾಗಿದೆ.

**ಅನ್ನಂ ನ ನಿಂದ್ಯಾತ್ ತದ್ ವ್ರತಮ್ –** 'ಅನ್ನವನ್ನು ಎಂದಿಗೂ ನಿಂದಿಸಬಾರದು. ಅದು ವ್ರತ.'

**ಅನ್ನಂ ನ ಪರಿಚಕ್ಷೀತ ತದ್ ವ್ರತಮ್ –** 'ಅನ್ನವನ್ನು ನಿರಾಕರಿಸಕೂಡದು. ಅದು ವ್ರತ.'

**ಅನ್ನಂ ಬಹು ಕುರ್ವೀತ ತದ್ ವ್ರತಮ್ –** 'ಅನ್ನವನ್ನು ಹೆಚ್ಚಾಗಿ ಮಾಡಬೇಕು. ಅದು ವ್ರತ.'

ಅನ್ನವನ್ನೂ, ವಸತಿಯನ್ನೂ ಯಾರಿಗೂ ನಿರಾಕರಿಸಕೂಡದು ಎಂದು ಹೇಳುತ್ತಾ, ಗೃಹಸ್ಥಧರ್ಮದ ಮುಖ್ಯ ಉದ್ದೇಶವನ್ನು ತಿಳಿಸಲಾಗಿದೆ. ಆದರ್ಶ ಮಾನವತಾವಾದಿಯ ಯೋಗ್ಯ ನಡತೆಯಿದು.

ಬ್ರಹ್ಮಾನಂದವನ್ನು ಹೊಂದಬೇಕಾದರೆ ಸಂಪೂರ್ಣ ವಿರಕ್ತಿಯೊಂದೇ ಮಾರ್ಗವಲ್ಲ. ಸದ್ಗೃಹಸ್ಥನಾಗಿದ್ದು, ಧರ್ಮಾಚರಣೆಯ ಮೂಲಕ ವಿಹಿತ ಕರ್ಮಗಳನ್ನಾಚರಿಸುತ್ತಾ, ಶ್ರದ್ಧೆಯಿಂದ ತಪಸ್ಸನ್ನು ಮಾಡುವ ಮೂಲಕ ಆ ಬ್ರಹ್ಮಾನಂದದ ಸ್ಥಿತಿಯನ್ನು ತಲುಪುವ ಮಾರ್ಗದರ್ಶನ ಎಲ್ಲ ಕಾಲದಲ್ಲಿಯೂ, ಎಲ್ಲ ಆಶ್ರಮದವರಿಗೂ ಅನುಸರಣೀಯ. ಇಂತಹ ಸಾರ್ವಕಾಲಿಕ ಸತ್ಯತೆಯಿಂದಾಗಿಯೇ ಈ ಉಪನಿಷತ್ತು ಚಿರನೂತನವೆನಿಸುತ್ತದೆ, ಆಪ್ತವೆನಿಸುತ್ತದೆ. 

## ಶ್ರೀ ರಾಮಾನುಜರ ಹೃದಯ

ಶ್ರೀರಂಗಂ ಸಮೀಪದ ಗೋಷ್ಠಿಪುರವೆಂಬ ಪಟ್ಟಣದಲ್ಲಿ ಗೋಷ್ಠಿಪೂರ್ಣರೆಂಬ ಸಾಧುಗಳಿದ್ದರು. ಶ್ರೀರಾಮಾನುಜರು ಅವರಿಂದ ವೈಷ್ಣವ ಮಂತ್ರವನ್ನು ಅರ್ಥಸಹಿತ ಕಲಿಯಬೇಕೆಂದು ಅವರ ಬಳಿಗೆ ಬಂದು, ಹಲವು ಬಾರಿ ಪ್ರಾರ್ಥಿಸಿಕೊಂಡರು. ಅವರ ಕೋರಿಕೆಯನ್ನು ಹದಿನೆಂಟು ಬಾರಿ ತಿರಸ್ಕರಿಸಿದರು ಗೋಷ್ಠಿಪೂರ್ಣರು. ಇದರಿಂದ ದುಃಖಿತರಾದ ರಾಮಾನುಜರು ಕಣ್ಣೀರಿಟ್ಟರು. ಆಗ ಹೃದಯ ಕರಗಿದ ಗೋಷ್ಠಿ ಪೂರ್ಣರು ಅವರಿಗೆ ಪವಿತ್ರವಾದ ಅಷ್ಟಾಕ್ಷರೀ ಮಂತ್ರವನ್ನು ಉಪದೇಶಿಸಿ, ''ಕಲಿಯುಗದಲ್ಲಿ ಇದನ್ನು ಪಡೆಯುವ ಇನ್ನೊಬ್ಬ ಯೋಗ್ಯ ವ್ಯಕ್ತಿಯಿಲ್ಲ. ಇದನ್ನು ಕೇಳಿದವನು ಸತ್ತ ಮೇಲೆ ನೇರ ವೈಕುಂಠಕ್ಕೆ ಹೋಗುತ್ತಾನೆ. ಆದರೆ ಇದನ್ನು ನೀನು ಯಾರಿಗಾದರೂ ಹೇಳಿದರೆ ನರಕಕ್ಕೆ ಹೋಗುತ್ತೀಯೆ. ಆದ್ದರಿಂದ ಯಾರಿಗೂ ಇದನ್ನು ಉಪದೇಶಿಸಬೇಡ'' ಎಂದರು.

ಗುರುವಿನಿಂದ ಬೀಳ್ಕೊಟ್ಟು ಶ್ರೀರಂಗಂಗೆ ಬಂದ ರಾಮಾನುಜರಿಗೆ ವಿಚಿತ್ರ ಭಾವನೆಯೊಂದು ಉದ್ಭವವಾಯಿತು. ಅವರು ಎದುರು ಸಿಕ್ಕಿದವರನ್ನೆಲ್ಲ ಕರೆದು, ''ಬನ್ನಿ, ನಿಮ್ಮಗೆಲ್ಲ ಅಮೂಲ್ಯ ರತ್ನವನ್ನು ಕೊಡುತ್ತೇನೆ'' ಎಂದರು. ಜನಸಾಗರವೇ ಅವರ ಹಿಂದೆ ಬಂತು. ದೇಗುಲದ ಗೋಪುರವನ್ನೇರಿದ ರಾಮಾನುಜರು ಎಲ್ಲರೂ ಕೇಳುವಂತೆ ಜೋರಾಗಿ, ತಾವು ಪಡೆದಿದ್ದ '**ಓಂ ನಮೋ ನಾರಾಯಣಾಯ**' ಎಂಬ ಅಷ್ಟಾಕ್ಷರೀ ಮಂತ್ರವನ್ನು ಉಚ್ಚರಿಸಿದರು. ಹೀಗೆ ಅವರಿಂದ ದೀಕ್ಷೆ ಪಡೆದವರೆಲ್ಲರೂ ಧನ್ಯರಾದರು.

ತಮ್ಮ ಶಿಷ್ಯನು ಮಾಡಿದ ಕೆಲಸವನ್ನು ಕೇಳಿದ ಗೋಷ್ಠಿಪೂರ್ಣರು ಕೆಂಡಮಂಡಲವಾಗಿ ಅವರನ್ನು ಬಯ್ಯತೊಡಗಿದರು. ರಾಮಾನುಜರು ವಿನೀತರಾಗಿ, ''ಈ ಮಂತ್ರವನ್ನು ಇತರರಿಗೆ ಉಪದೇಶಿಸಿದರೆ ನಾನು ನರಕಕ್ಕೆ ಹೋಗುವೆ, ಅಲ್ಲವೆ? ನಾನು ಅದಕ್ಕೆ ಸಿದ್ಧನಾಗಿಯೇ ಇದ್ದೇನೆ. ನನ್ನಂತಹ ನಿಕೃಷ್ಟನೊಬ್ಬ ನರಕಕ್ಕೆ ಹೋಗುವ ಮೂಲಕ ಸಾವಿರಾರು ಮಂದಿ ದುಃಖಿಗಳು, ಗಂಡಸರು, ಹೆಂಗಸರು, ಮಕ್ಕಳು ವೈಕುಂಠಕ್ಕೆ ಹೋಗುವುದಾದರೆ, ಇದಕ್ಕಿಂತ ಶುಭಕರವಾದದ್ದು ಇನ್ನೇನಿದೆ?'' ಎಂದು ಹೇಳಿದರು. 



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

## ಭಾಗ ೬

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

''ನಿರ್ಜನ ಪ್ರದೇಶದಲ್ಲಿದ್ದು ಕೊಂಡು ಸಾಧನೆ-ಭಜನೆ, ಜಪ-ಧ್ಯಾನಾದಿಗಳನ್ನು ಮಾಡಿ ಭಗವಂತನನ್ನು ಸಾಕ್ಷಾತ್ಕಾರಗೊಳಿಸಿಕೊಳ್ಳುವುದೇ ಮಠದಲ್ಲಿ ಎಲ್ಲರ ಆದರ್ಶವಾಗಿತ್ತು. ಇದಕ್ಕಾಗಿಯೇ ಅವರು ಮಠದಲ್ಲಿ ಅಥವಾ ತೀರ್ಥಕ್ಷೇತ್ರಗಳಲ್ಲಿ ಕಠಿಣ ತಪಸ್ಸನ್ನು ಆಚರಿಸುತ್ತಾ, ಪ್ರಾಣವನ್ನೇ ಪಣವಾಗಿ ಇಟ್ಟುಕೊಂಡು ಪ್ರಯತ್ನಿಸುತ್ತಿದ್ದರು. ಅವರಲ್ಲಿ ಯಾರಾದರೂ ತೀರ್ಥಯಾತ್ರೆಗೆ ಹೊರಟರೆ ಗೀತೆ, ಕೈಬರಹದಲ್ಲಿದ್ದ ಸ್ತೋತ್ರಗಳ ಪುಸ್ತಕ, ಅದರೊಂದಿಗೆ ಶ್ರೀರಾಮಕೃಷ್ಣರ ಒಂದು ಭಾವಚಿತ್ರ, ಜಪಮಾಲೆ ಇವುಗಳನ್ನೆಲ್ಲಾ ಒಂದು ಬಟ್ಟೆಯ ತುಂಡಿನಲ್ಲಿ ಕಟ್ಟಿಕೊಂಡಿರುತ್ತಿದ್ದರು; ಜೊತೆಗೆ ಒಂದು ಕಮಂಡಲು, ಒಂದೆರಡು ಬಟ್ಟೆಬರೆ ಮತ್ತು ಕಂಬಳಿಯನ್ನು ಮಾತ್ರ ಒಯ್ಯುತ್ತಿದ್ದರು. ಅನೇಕರು ಹಣವನ್ನು ಮುಟ್ಟುತ್ತಲೇ ಇರಲಿಲ್ಲ. ಮಧುಕರಿ (ಭಿಕ್ಷಾಟನೆ) ಮಾಡುತ್ತಿದ್ದರು, ಹಾಗೂ ಅಗತ್ಯ ಬಿದ್ದರೆ ನಡೆದುಕೊಂಡೇ ತೀರ್ಥಯಾತ್ರೆ ಮಾಡುತ್ತಿದ್ದರು.

''ನಿರಂಜನ ಮಹಾರಾಜರು ನನ್ನನ್ನು ತುಂಬ ಪ್ರೀತಿಸುತ್ತಿದ್ದರು. ಆಗಾಗ ದಕ್ಷಿಣೇಶ್ವರಕ್ಕೆ ತಮ್ಮ ಸಂಗಡ ಕರೆದುಕೊಂಡು ಹೋಗಿ, ಪಂಚವಟಿ ಹಾಗೂ ರಾಮಕೃಷ್ಣರ ಕೊಠಡಿಯಲ್ಲಿ ಧ್ಯಾನ ಮಾಡುತ್ತಿದ್ದರು. ಕೆಲವೊಮ್ಮೆ ಅವರೊಂದಿಗೆ ನಾನು ಏಡೇದಾರ್‌ನಲ್ಲಿರುವ ಅವರ ಸೋದರಮಾವನ ಮನೆಗೂ ಹೋಗಿದ್ದೆ. ನಾನು ಬೇಸಿಗೆ ರಜೆಯನ್ನು ಮಠದಲ್ಲಿ ಕಳೆದು, ಮನೆಗೆ ಹಿಂದಿರುಗಿ ಹೋಗುವಾಗ ಎರಡು-ಮೂರು ಬಾರಿ ಅವರು ನಮ್ಮ ಮನೆಗೂ ಬಂದಿದ್ದರು. ಆಗ ತ್ಯಾಗ-ವೈರಾಗ್ಯದ ಉಪದೇಶ ನೀಡಿ, ಮಠಕ್ಕೆ ಬಂದುಬಿಡಲು ಪ್ರೇರೇಪಿಸಿದ್ದರು.

''ಮಠದಲ್ಲಿ ಎಲ್ಲರೂ ಮುಂಜಾನೆ, ಸ್ನಾನದ ನಂತರ ಹಾಗೂ ಸಾಯಂಕಾಲ, ಅಷ್ಟೇ ಅಲ್ಲದೆ ರಾತ್ರಿ ಕೂಡ ಗುಟ್ಟಾಗಿ ತಮ್ಮ ತಮ್ಮ ಹಾಸಿಗೆಯಲ್ಲೇ ಕುಳಿತು ಧ್ಯಾನ-ಜಪ ಮಾಡುತ್ತಿದ್ದರು. ಕೆಲವರು ಪ್ರತಿದಿನವೂ ಭಾಷ್ಯಸಮೇತ ಶಾಸ್ತ್ರಾಧ್ಯಯನ ತಾವೊಬ್ಬರೇ ಮಾಡುತ್ತಿದ್ದರು. ಅಲ್ಲಿ ಬರುವ ಯಾವುದಾದರೊಂದು ಕ್ಲಿಷ್ಟ ವಿಚಾರದ ಬಗ್ಗೆ ಅವರೆಲ್ಲ ತರ್ಕ, ಚರ್ಚೆ ನಡೆಸುತ್ತಿದ್ದರು. ಸ್ಮಶಾನದ ಪಕ್ಕದ ಒಂದು ಬಿಲ್ವಮರದಲ್ಲಿ ೪-೫ ಅಷ್ಟೇ ಏಕೆ, ೬-೭ ದಳಗಳನ್ನು ಹೊಂದಿರುವ ಬಿಲ್ವಪತ್ರೆಗಳೂ ಸಿಗುತ್ತಿದ್ದವು. ಅಂಥ ಒಂದೊಂದು ಬಿಲ್ವಪತ್ರೆಯೂ ೧೦೦, ೧೦೦೦, ೧ ಲಕ್ಷ ಬಿಲ್ವಪತ್ರೆಗಳಿಗೆ ಸಮಾನ ಎಂದು ತಿಳಿದು ಅವನ್ನು ಹುಡುಕಿ ಹುಡುಕಿ ತರುತ್ತಿದ್ದೆ. ಇದರಿಂದ ಶಶಿಮಹಾರಾಜರು ತುಂಬ ಸಂತೋಷಪಡುತ್ತಿದ್ದರು. ಈ ರೀತಿಯ ಬಿಲ್ವಪತ್ರೆಗಳನ್ನು ಒಮ್ಮೆ ನಿವೇದಿಸಿದ ಮೇಲೆ, ಅದನ್ನೇ ಮತ್ತೆ ತೊಳೆದು ಮಾರನೇ ದಿನವೂ ಪೂಜೆಗೆ ಉಪಯೋಗಿಸಬಹುದು ಎನ್ನುವ ಕಾರಣದಿಂದ, ಹಾಗೆಯೇ ಮಾಡುತ್ತಿದ್ದರು.

''ಹಣದ ಅಭಾವದಿಂದಾಗಿ ಚಪಾತಿ ಹಿಟ್ಟಿಗೆ ಹೆಸರಿಗೆ ಮಾತ್ರ ಸ್ವಲ್ಪ ತುಪ್ಪ ಅಥವಾ ಎಣ್ಣೆ ಹಾಕಿ ಕಲಸಲಾಗುತ್ತಿತ್ತು. ಆದ್ದರಿಂದ ಬಿಸಿ ಇದ್ದಾಗಲೇ ತಿನ್ನಬೇಕೆಂದು (ಆರಿದರೆ ಬಹಳ ಗಟ್ಟಿಯಾಗುವುದೆಂದು) ಲಟ್ಟಿಸಲು ಪ್ರಾರಂಭಿಸಿದಾಗಲೇ ಎಲ್ಲರೂ ಊಟಕ್ಕೆ ಕುಳಿತುಕೊಳ್ಳುತ್ತಿದ್ದರು. ಚಪಾತಿ ತಯಾರಾಗುತ್ತಿದ್ದಂತೆಯೇ ಎಲೆಗೆ ಬಡಿಸಲಾಗುತ್ತಿತ್ತು. ಎಲ್ಲರೂ ಅದನ್ನು ಆಸ್ವಾದಿಸಿ ತಿನ್ನುತ್ತಿದ್ದರು. ಸುಮಾರು ಒಂದು ಸೇರು ಹಾಲು ಕೊಂಡುಕೊಂಡು, ಅದರಲ್ಲೇ ಠಾಕೂರರ ಪಾಯಸವಾಗುತ್ತಿತ್ತು. ಯಾರಾದರೂ ಕಾಯಿಲೆ ಬಿದ್ದರೆ ಮಾತ್ರ ಕೆಲವು ದಿನಗಳ ಮಟ್ಟಿಗೆ ಒಂದೆರಡು ಪಾವು ಹಾಲನ್ನು ಹೆಚ್ಚಾಗಿ ಕೊಂಡುಕೊಳ್ಳಲಾಗುತ್ತಿತ್ತು.

''ವೃದ್ಧ ಗೋಪಾಲ್ ದಾ (ಸ್ವಾಮಿ ಅದ್ವೈತಾನಂದರು) ಅಫೀಮು ಸೇವಿಸುತ್ತಿದ್ದರು. ಆದ್ದರಿಂದ ತಮಗೆಂದೇ ಅರ್ಧ ಸೇರು ಹಾಲಿನ ವ್ಯವಸ್ಥೆಯನ್ನು ಭಕ್ತರಿಂದ ಮಾಡಿಸಿಕೊಂಡಿದ್ದರು. ಗುರುಭಾಯಿಗಳು ಅವರ ಅಫೀಮು ಮತ್ತು ಹಾಲನ್ನು ಹಿಡಿದುಕೊಂಡು ತುಂಬ ತಮಾಷೆ ಮಾಡುತ್ತಿದ್ದರು. ಹಾಲಿನಲ್ಲಿ ಟೊಳ್ಳು ಹುಲ್ಲಿನ ಕಡ್ಡಿಯನ್ನು ಇಳಿಬಿಟ್ಟು, ಕೆನೆಯನ್ನು ಸ್ವಲ್ಪವೇ ಸರಿಸಿ ಹಾಲನ್ನು ಸ್ವಲ್ಪ ಹೀರಿ, ಅದರಷ್ಟೇ ನೀರನ್ನು ತುಂಬಿ ಇಡುತ್ತಿದ್ದರು. ಹಾಗಾದಾಗಲೆಲ್ಲಾ ಗೋಪಾಲ್ ದಾ, ''ಹಾಲಿನವನು ಹಾಲಿಗೆ ನೀರು ಬೆರೆಸಿದ್ದಾನೆ, ಆದ್ದರಿಂದಲೇ ನನಗೆ ಮಲಬದ್ಧತೆಯಾಗಿದೆ'' ಎಂದು ಗೊಣಗುಟ್ಟುತ್ತಿದ್ದರು. ಅವರು ತುಂಬ ಲೆಕ್ಕಾಚಾರದ ಮನುಷ್ಯರಾದ್ದರಿಂದ ಒಂದು ತಿಂಗಳ ಅಫೀಮನ್ನು ಕೊಂಡು ತಂದು, ೩೦-೩೧ ಗುಳಿಗೆಗಳನ್ನಾಗಿ ಮಾಡಿ ಒಂದು ಡಬ್ಬದಲ್ಲಿ ಇಡುತ್ತಿದ್ದರು. ಗುರುಭಾಯಿಗಳು ಅದರಿಂದ ಸ್ವಲ್ಪ ಅಫೀಮು ಗುಳಿಗೆಗಳನ್ನು ತೆಗೆದು, ಅದಕ್ಕೆ ಬದಲಾಗಿ ಖಯೇರ್ ಪುಡಿಯನ್ನು (ಅಡಿಕೆಗೆ ಬೆರೆಸುವ ಕೆಂಪು ಪುಡಿ) ಅದೇ ಆಕಾರದ ಗುಳಿಗೆಗಳನ್ನಾಗಿ ಮಾಡಿ ಇಡುತ್ತಿದ್ದರು. ಇದನ್ನು ೨-೩ ದಿನ ತಿಂದ ಗೋಪಾಲ್ ದಾ-ನಿಗಾದರೋ ಆಕಳಿಕೆ ಹಾಗೂ ವಿಪರೀತ ಆಯಾಸವುಂಟಾಯಿತು. ಏಕೆ ಹೀಗಾಗುತ್ತಿದೆ ಎಂದು ಅವರಿಗೆ ತಿಳಿಯುತ್ತಲೇ ಇರಲಿಲ್ಲ. ಇದು ಗುರುಭಾಯಿಗಳ ಕೀಟಲೆ ಎಂದು ತಿಳಿದು ಬಂದಾಗ, 'ಇದೆಲ್ಲ ನಿಮ್ಮ ಕೆಲಸವೊ!' ಎನ್ನುತ್ತ ಅವರು ತುಂಬಾ ಕೋಪಿಸಿ

ಕೊಂಡು ಬೈದಾಡುತ್ತಿದ್ದರು. ಅದನ್ನು ಕಂಡು ಸೋದರರು ತುಂಬ ಜೋರಾಗಿ ನಕ್ಕು ಆನಂದಿಸುತ್ತಿದ್ದರು. ಇದು ನಾನು ಅಲ್ಲಿಗೆ ಹೋಗುವ ಮೊದಲು ನಡೆದ ಘಟನೆ — ಸ್ವಾಮೀಜಿ ಮಠದಲ್ಲಿದ್ದಾಗ ನಡೆದುದು.

''ಒಂದು ದಿನ ನನ್ನಿಂದಾಗಿ ಬಹಳ ತಮಾಷೆಯ ಘಟನೆ ನಡೆಯಿತು. ಮನೆಯಲ್ಲಿದ್ದಾಗ ನನಗೆ ರಾತ್ರಿಹೊತ್ತು ಸಾಮಾನ್ಯವಾಗಿ ನಿದ್ರೆ ಬರುತ್ತಿರಲಿಲ್ಲ. ಮಲಗಿ, ದಿಂಬಿನ ಮೇಲೆ ಅತ್ತಿಂದಿತ್ತ ಸ್ವಲ್ಪ ಹೊತ್ತು ತಲೆ ಹೊರಳಿಸಿದಾಗ ನಿದ್ರೆ ಹತ್ತುತ್ತಿತ್ತು. ವರಾಹನಗರ ಮಠಕ್ಕೆ ಸೇರಿದಾಗಲೂ ನನಗೆ ಈ ಅಭ್ಯಾಸವಿತ್ತು. ಮಠದಲ್ಲಿ ಎಲ್ಲರೂ ಅಕ್ಕಪಕ್ಕದಲ್ಲೇ ಮಲಗುತ್ತಿದ್ದೆವು. ಒಂದು ದಿನ ಹಿಂದಿನ ಅಭ್ಯಾಸದಂತೆ ತಲೆಯನ್ನು ಹೊರಳಿಸುತ್ತಿದ್ದೆ. ಅದು ಹಳೆಯ ಮನೆಯಾದ್ದರಿಂದ ನೆಲ ಕಂಪಿಸತೊಡಗಿತು. ಶಿವಾನಂದ ಮಹಾರಾಜರು ಅದು ಭೂಕಂಪವೆಂದು ಭಾವಿಸಿ, ''ಏನಿದು? ಏನಿದು?'' ಎಂದು ಆತಂಕದಿಂದ ಕೂಗಾಡಿದರು. ಎಲ್ಲರೂ ಎಚ್ಚರಗೊಂಡರು. ನಾನು ಹೀಗಾಗುವುದೆಂದು ಎಣಿಸಿರಲಿಲ್ಲ. ಗಲಿಬಿಲಿಗೊಂಡು ಹೇಳಿದೆ, ''ಇಲ್ಲ, ಹಾಗೇನೂ ಅಲ್ಲ; ನಿದ್ರೆ ಬರುತ್ತಿಲ್ಲವೆಂದು ತಲೆ ಹೊರಳಾಡಿಸುತ್ತಿದ್ದೆ ಅಷ್ಟೇ!''

''ನಾನು ಮಠವನ್ನು ಸೇರಿದ ಸುದ್ದಿ ತಿಳಿದ ನನ್ನ ವೃದ್ಧ ತಾತ (ವಿನೋದ ವಿಹಾರಿ), ನಾನು ತಂದೆಯ ವಾಗ್ದಂಡನೆ ಸಹಿಸಲಾಗದೆ ಮುನಿಸಿಕೊಂಡು ಮನೆಬಿಟ್ಟು ಸಂನ್ಯಾಸಿಯಾದೆನೆಂದು ಭಾವಿಸಿದ್ದರು. ಒಂದು ದಿನ ಸಾಯಂಕಾಲ ಅವರು ಹಠಾತ್ತಾಗಿ ನನ್ನನ್ನು ಹುಡುಕಿಕೊಂಡು ಮಠಕ್ಕೆ ಬಂದರು. ನನ್ನೊಂದಿಗೆ ಶಾರದಾ ಮಹಾರಾಜರೂ ಬಂದು, ಅವರನ್ನು ಗಾಡಿಯಿಂದ ಇಳಿಸಿ ಕರೆತಂದು, ಬಹಳ ಗೌರವ ತೋರಿಸಿ, ಹೊರಮನೆಯಲ್ಲಿ ಕುಳ್ಳಿರಿಸಿ ಉಪಚರಿಸಿದರು. ತಂಬಾಕನ್ನೂ ಸಿದ್ಧಪಡಿಸಿಕೊಟ್ಟರು. ತಾತನವರು ಶಾರದಾ ಮಹಾರಾಜರ ನಡವಳಿಕೆಯನ್ನು ಕಂಡು ಮನಸೋತರು; ನಾನು ಬಹಳ ಸುಸಂಸ್ಕೃತರ ಹಾಗೂ ಆದರಣೀಯ ಮನೆತನದ ಮಕ್ಕಳ ಜೊತೆಗಿದ್ದೇನೆ ಎಂದೂ ತಿಳಿದುಕೊಂಡರು. ಅವರು ನನ್ನನ್ನು ಅಪ್ಪಿಕೊಂಡು ಅಳಲಾರಂಭಿಸಿದರು. ಎಷ್ಟು ಹೇಳಿದರೂ ಅವರಿಗೆ ಸಮಾಧಾನವಾಗುತ್ತಿಲ್ಲ. ''ನೀನು ಏನು ಬೇಕಾದರೂ ಹೇಳು, ನನಗೆ ಗೊತ್ತು, ನೀನು ಮನನೊಂದು ಕೋಪಿಸಿಕೊಂಡು ಮನೆಬಿಟ್ಟು ಬಂದಿದ್ದೀಯಾ. ಈಗ ನನ್ನೊಂದಿಗೆ ಬಾ, ನಿನಗೆ ಇನ್ನು ಯಾರೂ ಏನೂ ಹೇಳುವುದಿಲ್ಲ..'' ಎಂದು ಮುಂತಾಗಿ ಹೇಳತೊಡಗಿದರು. ಅವರು ಅಂದುಕೊಂಡಿರುವುದು ಸರಿಯಲ್ಲವೆಂದು ನಾನವರಿಗೆ ಅನೇಕ ವಿಧದಲ್ಲಿ ವಿವರಿಸಿ, ಕೊನೆಗೆ ನಾನು ಆಗಿಂದಾಗ್ಗೆ ಅವರ ಮನೆಗೆ ಹೋಗಿ ಅವರನ್ನು ನೋಡಿಕೊಂಡು ಬರುತ್ತೇನೆ ಎಂದು ಮಾತುಕೊಟ್ಟು , ಅವರನ್ನು ಗಾಡಿಯಲ್ಲಿ ಕುಳ್ಳಿರಿಸಿ ಕಳುಹಿಸಿಕೊಟ್ಟೆ. ಆಗ ಅವರು ತಮ್ಮ ಸಿಮ್ಲದಲ್ಲಿದ್ದ ಮನೆಯನ್ನು ಮಾರಿ ದರ್ಜಿಪಾಡಾದಲ್ಲಿ ವಾಸವಾಗಿದ್ದರು. ಆಗಿನಿಂದ ನಾನು ಆಗಾಗ ಹೋಗಿ ಅವರನ್ನು ನೋಡಿಬರುತ್ತಿದ್ದೆ.''

ಱ

### ಹೊಸದರಿಂದ ಹೊಚ್ಚಹೊಸ ವಿಶ್ವಕ್ಕೆ

ಶ್ರೀರಾಮಕೃಷ್ಣರು ಈಗ ಸ್ಥೂಲ ಶರೀರದಲ್ಲಿಲ್ಲ. ಆದರೆ ಅವರ ಲೀಲಾಸಂಗಾತಿ ಶ್ರೀಮಾತೆ ಶಾರದಾದೇವಿಯವರು ಬದುಕಿದ್ದಾರೆ. ಅವರ ಬಗ್ಗೆ ಆಗಾಗ ಮಾತುಕತೆಗಳಾಗುತ್ತಿದ್ದವು; ಅವುಗಳನ್ನು ಕಾಳೀಕೃಷ್ಣನೂ ಕೇಳುತ್ತಿದ್ದ. ಅವರ ದರ್ಶನ ಪಡೆಯಲು ಅವನ ಜೀವವು ಹಾತೊರೆಯುತ್ತಿತ್ತು. ಯೋಗ್ಯವಾದ ಅವಕಾಶಕ್ಕಾಗಿ ಅವನು ಕಾಯುತ್ತಿದ್ದ. ಹೀಗೆಯೇ ಕೆಲವು ತಿಂಗಳು ವರಾಹನಗರ ಮಠದಲ್ಲಿ ಆನಂದದಿಂದ ಕಳೆಯುತ್ತಿದ್ದಂತೆ ಒಂದು ದಿನ ಅನಿರೀಕ್ಷಿತವಾಗಿ ಸುಯೋಗವೊಂದು ಒದಗಿಬಂತು. ಶ್ರೀಮಾತೆಯವರು ಜಗದ್ಧಾತ್ರೀ ಪೂಜೆಯನ್ನು ಮಾಡಬೇಕೆಂದು ಸಂಕಲ್ಪ ಮಾಡಿದ್ದರು. ಅದರಲ್ಲಿ ಭಾಗವಹಿಸುವುದಕ್ಕಾಗಿ ಶರತ್ ಮಹಾರಾಜರು ಜಯರಾಂಬಾಟಿಗೆ ಹೊರಟಿದ್ದರು. ಅವರು ಕಾಳೀಕೃಷ್ಣನನ್ನು ಕರೆದು ಕೇಳಿದರು,''ಏನಪ್ಪ ಕಾಳೀಕೃಷ್ಣ, ನೀನೂ ನಮ್ಮೊಡನೆ ಬರುತ್ತೀ ತಾನೆ? ಹೊರಡು ಹಾಗಾದರೆ.'' ಸರಿ, ಕಾಳೀಕೃಷ್ಣನೂ ಆನಂದದಿಂದ ತುಂಬಿತುಳುಕುತ್ತಾ ಹೊರಡಲು ಸಿದ್ಧನಾದ. ಅದು ೧೮೯೧ರ ಅಕ್ಟೋಬರ್ ತಿಂಗಳು.

ಕೊಲ್ಕತ್ತಾದಿಂದ ರೈಲಿನಲ್ಲಿ ವರ್ಧಮಾನಕ್ಕೆ ಬಂದರು. ಅಲ್ಲಿ ಒಂದು ಸತ್ರದಲ್ಲಿ ರಾತ್ರಿಯನ್ನು ಕಳೆದರು. ಶರತ್ ಮಹಾರಾಜರು, ಸಂನ್ಯಾಲ ಮಹಾಶಯ (ವೈಕುಂಠನಾಥ ಸಂನ್ಯಾಲ), ಹರಮೋಹನ ಮಿತ್ರ, ಗೋಲಾಪ್ ಮಾ, ಯೋಗಿನ್ ಮಾ ಮತ್ತು ಕಾಳೀಕೃಷ್ಣ ಇವರೆಲ್ಲ ಮೂರು ಎತ್ತಿನ ಗಾಡಿಯಲ್ಲಿ ನಸುಕಿನಲ್ಲೇ ಪ್ರಯಾಣ ಮುಂದುವರಿಸಿದರು. ಬೆಳಿಗ್ಗೆಯೇ ದಾಮೋದರ ನದಿಯನ್ನು ದಾಟಿ, ಮಧ್ಯಾಹ್ನ ಒಂದು ಬಿಡದಿಯಲ್ಲಿ ಅಡಿಗೆ-ಸ್ನಾನ, ಆಹಾರಗಳನ್ನು ಮುಗಿಸಿದರು. ರಾತ್ರಿಯನ್ನು ಉಚಾಲನ್ ಎಂಬ ಬಿಡಾರದಲ್ಲಿ ಕಳೆದರು. ಮಾರನೇ ದಿನ ಬೆಳಗ್ಗೆ ಮತ್ತೆ ಪ್ರಯಾಣ ಆರಂಭಿಸಿ, ದ್ವಾರಕೇಶ್ವರ ಎಂಬ ಮತ್ತೊಂದು ನದಿಯನ್ನು ದಾಟಿದರು. ಮಧ್ಯಾಹ್ನದ ಹೊತ್ತಿಗೆ ಕಾಮಾರಪುಕುರವನ್ನು ತಲುಪಿದರು. ಶ್ರೀರಾಮಕೃಷ್ಣರ ಮನೆಯಲ್ಲೇ ಈ ಯಾತ್ರಿಕರ ಗುಂಪು ತಂಗಿತು.

ಪುಣ್ಯಭೂಮಿ ಕಾಮಾರಪುಕುರ! ಅದೇ ಪರ್ಣಕುಟೀರ, ಅದೇ ಪ್ರಾಂಗಣ, ಅದೇ ತರುಲತೆಗಳು, ಅದೇ ಬೀದಿಗಳು! ಕೆಲವು ದಿನಗಳ ಹಿಂದೆಯಷ್ಟೇ ಮಾನವ ದೇಹಧಾರಿಯಾಗಿ ಭಗವಂತನು ಇಲ್ಲೆಲ್ಲಾ ಸಂಚರಿಸಿ ಹೋಗಿದ್ದಾನೆ. ರಘುವೀರನ ವಿಗ್ರಹವು ಧರ್ಮಪರಾಯಣರಾದ ರಾಮಕೃಷ್ಣರ ತಂದೆ ಕ್ಷುದಿರಾಮ ಚಟ್ಟೋಪಾಧ್ಯಾಯರ ಹಾಗೂ ತಾಯಿ ಚಂದ್ರಾದೇವಿಯ ಪುಣ್ಯ ಸ್ಮೃತಿಯನ್ನು ಮನಸ್ಸಿನಲ್ಲಿ ಮೂಡಿಸುವುದು. ಯೋಗಿ ಶಿವಮಂದಿರ, ಗದಾಧರನು ಭೂಮಿಗಿಳಿದು ಬಂದ ಸ್ಥಳವೆಂದು ಗುರುತು ಮಾಡಿ ಇಟ್ಟಿರುವ ಕೊಟ್ಟಿಗೆ ಮನೆ, ಹಾಲದಾರ ಪುಕುರ,



ಜಯರಾಮಬಾಟಿಯಲ್ಲಿ ಶ್ರೀಮಾತೆಯವರ ಮನೆ

ಲಾಹಾಗಳ ಮನೆ, ಪಾಠಶಾಲೆ ನಡೆಯುತ್ತಿದ್ದಂತಹ ಪೂಜಾ ಮಂಟಪ, 'ಭೂತಿರ್ ಖಾಲ್' ಸ್ಮಶಾನ, ಮಾಣಿಕ್ ರಾಜನ ಮಾವಿನ ತೋಪು— ಈ ಪ್ರತಿಯೊಂದು ಸ್ಥಳದಲ್ಲೂ ಶ್ರೀರಾಮ ಕೃಷ್ಣರ ಜೀವನದ ಎಷ್ಟೊಂದು ಘಟನೆಗಳು ಹೆಣೆದುಕೊಂಡಿವೆ! ಈ ಸ್ಥಳಗಳಲ್ಲೆಲ್ಲ ತಿರುಗಾಡುತ್ತಿದ್ದಾಗ ಯುವಕ ಕಾಳೀಕೃಷ್ಣನ ಹೃದಯದಲ್ಲಿ ಉಂಟಾದ ಅಪೂರ್ವ ಭಾವೋಲ್ಲಾಸವು ಅವನನ್ನು ಉನ್ಮತ್ತನನ್ನಾಗಿಸಿದವು. ಮಾರನೇ ದಿನ ಬೆಳಗಿನ ಹೊತ್ತು ಎಲ್ಲರೂ ಹೊಲಗದ್ದೆಗಳ ತೆವರಿಯ ಮೇಲೆ ನಡೆದು ನಾಲ್ಕು ಮೈಲಿ ದೂರ ದಲ್ಲಿದ್ದ ಜಯರಾಂಬಾಟಿಯನ್ನು ತಲುಪಿದರು. ಸಾಮಾನು-ಸರಂಜಾಮುಗಳನ್ನು ಸೇವಕರು ಹೊತ್ತು ತಂದಿದ್ದರು.

ಶ್ರೀಮಾತೆಯವರ ಪ್ರತ್ಯಕ್ಷ ಸನ್ನಿಧಿ! ಅನೇಕ ದಿನಗಳ ನಿರೀಕ್ಷೆ ಇಂದು ಸಫಲಗೊಂಡಿದೆ. ಶ್ರೀಮಾತೆಯವರು ಕಾಳೀಕೃಷ್ಣನ ಗಲ್ಲವನ್ನು ಸ್ಪರ್ಶಿಸಿ ಮುದ್ದಿಸಿದರು. ಎಲ್ಲರನ್ನೂ ಕಂಡು ಅವರಿಗಾದ ಆನಂದ ಅಷ್ಟಿಷ್ಟಲ್ಲ! ಇವರಿಗೆ ಏನೇನು ಮಾಡಲಿ, ಏನನ್ನು ತಿನ್ನಿಸಲಿ ಎಂದು ಅವರಿಗೆ ಆಲೋಚಿಸಿ ಮುಗಿಯದು. ಎರಡು ಹೊತ್ತು ತಾವೇ ಸ್ವತಃ ಅಡಿಗೆ ಮಾಡುವರು, ಪಕ್ಕದಲ್ಲೇ ಕುಳ್ಳಿರಿಸಿಕೊಂಡು ಉಣಬಡಿಸುವರು, ಹೆಚ್ಚು ಹೆಚ್ಚು ತಿನ್ನುವಂತೆ ಬಲವಂತ ಮಾಡು ವರು. ತಾಯಿಯ ಕೈಯಡುಗೆ ಅಮೃತದಂತಿತ್ತು. ಕರುಣೆಯೇ ಮೂರ್ತಿವೆತ್ತಂತಿದ್ದ, ಪ್ರೇಮರೂಪಿಣಿಯಾದ ಮಾತೆಯ ಎಣೆ ಯಿಲ್ಲದ ವಾತ್ಸಲ್ಯವನ್ನುಂಡ ಆ ತರುಣ ಬ್ರಹ್ಮಚಾರಿಯ ಮನಸ್ಸು ಒಂದೇ ಸವನೆ ಪರವಶಗೊಂಡಿತು.

ಜಯರಾಂಬಾಟಿಯಲ್ಲಿ ಶರತ್ ಮಹಾರಾಜ್, ಸಂನ್ಯಾಲ್, ಹರಮೋಹನ ಹಾಗೂ ಕಾಳೀಕೃಷ್ಣ ಈ ನಾಲ್ವರೂ ಹೊರಗಿನ ಚಿಕ್ಕ ಕೊಠಡಿಯಲ್ಲಿ ವಾಸಿಸುತ್ತಿದ್ದರು. ಆ ಕೊಠಡಿಯ ಹಿಂಬಾಗಿಲು ತೆರೆದರೆ ಒಂದು ಚಿಕ್ಕ ಅಂಗಳ. ಅದರ ಮುಂದೆಯೇ ಶ್ರೀಮಾತೆ ಯವರು ಇದ್ದ ಕುಟೀರ. ಅದರ ಜಗಲಿಯ ಮೇಲೆ ಕುಳಿತು ಶ್ರೀಮಾತೆಯವರು ತರಕಾರಿ ಹೆಚ್ಚುವುದು ಮುಂತಾದ ಕೆಲಸ ಗಳನ್ನು ಮಾಡುತ್ತಿದ್ದುದನ್ನು ಕಾಳೀಕೃಷ್ಣನು ನೋಡುತ್ತಿದ್ದನು. ಇವನು ಚಿಕ್ಕ ಹುಡುಗನೆಂದು ಇವನೆದುರಿಗೆ ಶ್ರೀಮಾತೆಯವರಿಗೆ ಸಂಕೋಚವಾಗುತ್ತಿರಲಿಲ್ಲ. ತಿಂಡಿ, ತಾಂಬೂಲ ತರುವುದು, ಶರತ್ ಮಹಾರಾಜ್ ಹಾಗೂ ಸಂನ್ಯಾಲರಿಗೆ ಹುಕ್ಕಾಗೆ ಕೆಂಡ ತರು ವುದು ಮುಂತಾದ ಸಣ್ಣಪುಟ್ಟ ಕೆಲಸಗಳಿಗಾಗಿ ಕಾಳೀಕೃಷ್ಣನು ಆಗಾಗ ಶ್ರೀಮಾತೆಯವರ ಕುಟೀರಕ್ಕೆ ಹೋಗಬೇಕಾಗುತ್ತಿತ್ತು. ಹೀಗಾಗಿ ಅವನಿಗೆ ಅನೇಕ ಸಲ ಶ್ರೀಮಾತೆಯವರ ದರ್ಶನಭಾಗ್ಯ ಲಭಿಸುತ್ತಿತ್ತು. ಈ ಸುಯೋಗಕ್ಕಾಗಿ ಅವನಿಗೆ ತುಂಬ ಸಂತೋಷ ವಾಗುತ್ತಿತ್ತು. ಮಗನಿಗೆ ಸ್ವಂತ ಕೈಯಿಂದ ಬೆಂಕಿ ಕೊಡಬಾರದೆಂಬ ಸಂಪ್ರದಾಯದಿಂದಾಗಿ, ಶ್ರೀಮಾತೆಯವರು ಕೆಂಡವನ್ನು ನೆಲಕ್ಕೆ ಕೆಡವಿ, ಚಿಮಟಿಯನ್ನು ಕೊಡುತ್ತಿದ್ದರು. ಕಾಳೀಕೃಷ್ಣನು ಅದನ್ನು ಅಲ್ಲಿಂದ ಚಿಮಟಿಯಲ್ಲಿ ತೆಗೆದುಕೊಂಡು ಹೋಗುತ್ತಿದ್ದನು.

ಈ ಅತಿಥಿಗಳಿಗೆ ಅಲ್ಲಿ ಅಂಥ ವಿಶೇಷ ಕೆಲಸವೇನೂ ಇರಲಿಲ್ಲ; ಜಪ-ಧ್ಯಾನ, ಮಾತುಕತೆ, ಊಟ ಮಾಡುವುದು, ಮಲಗುವುದು ಹಾಗೂ ಸಂಜೆ ಆಮೋದರ ನದೀತೀರದಲ್ಲಿ ತಿರುಗಾಡುವುದು —ಅಷ್ಟೇ! ಹೀಗೆ ಶ್ರೀಮಾತೆಯವರ ದಿವ್ಯ ಚರಣಗಳ ಸಾನ್ನಿಧ್ಯ ದಲ್ಲಿ ವಿಶ್ರಾಂತಿ ಹಾಗೂ ಆನಂದದಿಂದ ದಿನಗಳು ಕಳೆಯತೊಡಗಿ ದವು. ಶರತ್ ಮಹಾರಾಜ್ ಹಾಗೂ ಕಾಳೀಕೃಷ್ಣರು ಬೆಳಿಗ್ಗೆ ಹೂಬುಟ್ಟಿ ಹಾಗೂ ದೋಟಿ ಹಿಡಿದು ಗ್ರಾಮದಲ್ಲೂ, ನದೀತೀರ ದಲ್ಲೂ ಬಿಲ್ವಪತ್ರೆ ಮತ್ತು ಹೂಗಳನ್ನು ಆರಿಸಿ ತರುತ್ತಿದ್ದರು.

ಶ್ರೀಮಾತೆಯವರ ವೃದ್ಧತಾಯಿಯು (ಶ್ಯಾಮಾಸುಂದರೀ ದೇವಿ) ಎಲ್ಲರಿಗೂ 'ಅಜ್ಜಿ'. ತುಂಬಾ ಸರಳ ಹಾಗೂ ಮಧುರ ಸ್ವಭಾವದ ವ್ಯಕ್ತಿ ಆಕೆ. ಹಗಲೂರಾತ್ರಿ ಒಂದಲ್ಲ ಒಂದು ಕೆಲಸದಲ್ಲಿ ನಿರತರಾಗಿರುತ್ತಿದ್ದರು. ದನಕರುಗಳ ಸೇವೆ, ಕೊಟ್ಟಿಗೆ ತೊಳೆಯು ವುದು, ಕೆಲಸಗಾರರಿಗೆ ಉಣಬಡಿಸುವುದು, ಭತ್ತ ಬೇಯಿಸಿ ಕುಟ್ಟುವುದು ಇತ್ಯಾದಿ. ಆದರೆ ಮುಖದಲ್ಲಿ ಯಾವಾಗಲೂ ನಗು. ಅಜ್ಜಿ ರೇಗುವುದನ್ನಾಗಲಿ, ಗದರುವುದನ್ನಾಗಲಿ ಯಾರೂ ಕಂಡಿರ ಲಿಲ್ಲ. ಸ್ವತಃ ಶ್ರೀಮಾತೆಯವರೇ ತಮ್ಮ ತಾಯಿಯ ಸೇವೆಯನ್ನು ಬಹುವಾಗಿ ಮಾಡುತ್ತಿದ್ದರು; ಅವರ ಕೆಲಸದಲ್ಲಿ ತಮಗಾದಷ್ಟು ಸಹಾಯ ಮಾಡುತ್ತಿದ್ದರು. 'ಅಜ್ಜಿ' ಎಂದು ಕರೆದರೆ ಸಾಕು, ಆ ವೃದ್ಧೆ ಆನಂದದಿಂದ ಉಬ್ಬಿಹೋಗುತ್ತಿದ್ದರು. ಶ್ರೀರಾಮಕೃಷ್ಣರಿಗೆ ಸಂಬಂಧಿಸಿದ ಹಿಂದಿನ ಅನೇಕ ಘಟನೆಗಳನ್ನು ಅವರಿಂದ ಕೇಳ ಬಹುದಾಗಿತ್ತು.

ಒಂದು ದಿನ ಒಬ್ಬ ಭಿಕಾರಿ ಬೈರಾಗಿಯು ಬಂದು, ಪಿಟೀಲು ಬಾರಿಸುತ್ತಾ ಈ ಹಾಡನ್ನು ಹಾಡುತ್ತಿದ್ದ :

ಏನು ಸಂತಸದ ಸುದ್ದಿ ಇದು ಉಮೆ!
ಜನರ ಬಾಯಲ್ಲಿ ಕೇಳಿದ್ದು ಸತ್ಯವೇನೇ ಶಿವಾನಿ,
ಕಾಶೀಧಾಮದಿ ನಿನ್ನ ಹೆಸರು ಅನ್ನಪೂರ್ಣೆಯಂತೆ!
ಅಪರ್ಣೇ ನಿನ್ನನ್ನು ನಾ ಅವನಿಗರ್ಪಿಸಿದಾಗ
ಭೋಲಾನಾಥನಾಗಿದ್ದ ಮುಷ್ಟಿಯ ಭಿಕಾರಿ;
ಈಗ ಅವೇನು ಸುಖದ ಸುದ್ದಿ, ಶುಭಂಕರಿ
ವಿಶ್ವೇಶ್ವರನ ಎಡದಲ್ಲಿ ನೀನಾಗಿರುವೆಯಂತೆ ವಿಶ್ವೇಶ್ವರಿ!

ಮರುಳನೆಂದೇ ಜರೆಯುತ್ತಿದ್ದರು ದಿಗಂಬರನನ್ನು
ಅದೆಷ್ಟು ನೊಂದು ಬೆಂದಿದ್ದೆನೋ ನಾನು
ಈಗಲಾದರೋ, ಆತನ ಬಾಗಿಲಲ್ಲಿ ದ್ವಾರಪಾಲಕನಿರುವರಂತೆ
ಇಂದ್ರ-ಚಂದ್ರ-ಯಮರಿಗೂ ದರುಶನವಾಗದಂತೆ!
ಇದೆಲ್ಲಾ ಸಿರಿ-ಸಂಪತ್ತಿನ ಪ್ರಭಾವವೇ ಸರಿ!
ಇಲ್ಲದೊಡೆ ನಿನಗ್ಯಾಕಿಷ್ಟು ಗರುವ ಗೌರಿ?
ಅಯ್ಯೋ ಸ್ವಂತ ಮಗನನ್ನೇ ಕಣ್ಣೆತ್ತಿ ನೋಡದೆ
ಮುಖ ತಿರುಗಿಸುತ್ತಿರುವಳಲ್ಲಾ ರಾಧಿಕನ ಹೆಸರು ಕೇಳಿ!

ಹಾಡಾದರೋ ಶ್ರೀಮಾತೆಯವರ ಜೀವನವನ್ನು ತದ್ವತ್ ಪ್ರತಿಬಿಂಬಿಸುವಂತಿತ್ತು. ಆದ್ದರಿಂದ ಇದನ್ನು ಕೇಳಿದವರೆಲ್ಲರೂ ಭಾವಪರವಶರಾದರು. ಗೋಲಾಪ್ ಮಾ ಮತ್ತು ಯೋಗಿನ್ ಮಾ ಆ ಹಾಡನ್ನು ಮತ್ತೆ ಹಾಡುವಂತೆ ಅವನಿಗೆ ಹೇಳಿಕಳುಹಿಸಿದರು. ಆತನು ಮತ್ತೆ ಹಾಡಿದನು. ಅವನಿಗೆ ನಂತರ ಕೆಲವು ನಾಣ್ಯಗಳನ್ನಿತ್ತು, ಅಕ್ಕಿ ಬೇಳೆಯ ಬಾಗಿನವನ್ನು ನೀಡಿದರು. ಆಗ ಅಜ್ಜಿ ಹೇಳತೊಡಗಿದರು: ''ಹೌದು, ಎಲ್ಲರೂ ಅಳಿಯನನ್ನು (ಶ್ರೀರಾಮಕೃಷ್ಣರನ್ನು) ಆಗ ಹುಚ್ಚನೆಂದೇ ಕರೆಯುತ್ತಿದ್ದರು, ಶಾರದೆಯ ಅದೃಷ್ಟವನ್ನು ಹಳಿಯುತ್ತಿದ್ದರು. ಎಷ್ಟೊಂದು ನಿಂದಿಸುತ್ತಿದ್ದರೆಂದರೆ, ದುಃಖದಿಂದ ನನಗೆ ಪ್ರಾಣವೇ ಹೋದಂತಾಗುತ್ತಿತ್ತು. ಆದರೆ ಈಗ ನೋಡು, ಗೌರವಸ್ಥ ಮನೆತನದಿಂದ ಬಂದ ಎಷ್ಟೊಂದು ಮಂದಿ ಸ್ತ್ರೀ-ಪುರುಷರು ಶಾರದೆಯನ್ನು ಸಾಕ್ಷಾತ್ ದೇವಿಯೆಂದೇ ತಿಳಿದು ಅವಳ ಪಾದಪೂಜೆ ಮಾಡುತ್ತಿದ್ದಾರೆ!''

ಜಗದ್ಧಾತ್ರೀ ಪೂಜೆ ಬಂದೇಬಿಟ್ಟಿತು; ಬಹಳ ವೈಭವದಿಂದ ನಡೆಯಿತು. ಪ್ರತಿಮೆ ಬಹಳ ಚಿತ್ತಾಕರ್ಷಕವಾಗಿತ್ತು. ದುರ್ಗಾ ಪೂಜೆಯಂತೆಯೇ ಮೂರು ದಿನಗಳ ಪೂಜೆ ನಡೆಯಿತು. ಶ್ರೀಮಾತೆಯವರು ಮಿಕ್ಕ ಸ್ತ್ರೀಯರೊಂದಿಗೆ ಪೂಜೆಗೆ ಅಣಿ ಮಾಡುವುದು, ಅಡಿಗೆಗೆ ಸಿದ್ಧತೆ ಮಾಡುವುದು ಇತ್ಯಾದಿಗಳಲ್ಲಿ ಹಗಲೂ ರಾತ್ರಿ ಮಗ್ನರಾಗಿರುತ್ತಿದ್ದರು. ಸಂಧ್ಯಾರತಿಯ ಸಮಯದಲ್ಲಿ ಹಾಗೂ ಮಹಾಷ್ಟಮಿಯ ದಿನ ಸಂಧಿಪೂಜೆಯ ಸಮಯದಲ್ಲಿ ಶ್ರೀಮಾತೆ ಬಂದು, ಕೈ ಮುಗಿದುಕೊಂಡು ದೇವಿಯ ದರ್ಶನ ಮಾಡುತ್ತಿದ್ದರು. ಕೆಲವೊಮ್ಮೆ ಚಾಮರ ಬೀಸುತ್ತಿದ್ದರು. ಬಹುದೂರದ ಗ್ರಾಮಗಳಿಂದ ಆಮಂತ್ರಿತರಾಗಿ ಬಂದಿದ್ದ ಬ್ರಾಹ್ಮಣ ಪಂಡಿತರು ಹಾಗೂ ಸಭ್ಯರು, ಅಭ್ಯಾಗತ ರೈತರು ಹಾಗೂ ದರಿದ್ರ ನಾರಾಯಣರಿಗೆ ಮೂರು ದಿನಗಳಲ್ಲಿಯೂ ಸಹ ಪದ್ಧತಿಯಂತೆ ಅನ್ನ, ಉದ್ದಿನಬೇಳೆ ತೊವ್ವೆ, ಗಸಗಸೆ ಹಾಕಿದ ಚಚ್ಚೊಡಿ (ಒಂದು ಬಗೆಯ ಪಲ್ಯ) ಮತ್ತು ಇತರ ತರಕಾರಿ ಪದಾರ್ಥಗಳು, ಮೊಸರು, ಮಿಠಾಯಿಗಳನ್ನು ತೃಪ್ತಿಯಾಗುವವರೆಗೂ ಉಣಬಡಿಸಲಾಯಿತು. ಎರಡು ದಿನ ರಾತ್ರಿಹೊತ್ತು ಬಯಲಾಟವೂ ಜರುಗಿತು.

ಜಗದ್ಧಾತ್ರಿ ಪೂಜೆಯಾದ ಎರಡು-ಮೂರು ದಿನಗಳ ನಂತರ ಶರತ್ ಮಹಾರಾಜರೂ ಸೇರಿದಂತೆ ನಾಲ್ವರೂ ಮಲೇರಿಯಾ ಜ್ವರಕ್ಕೀಡಾದರು. ಅವರು ಇಳಿದುಕೊಂಡಿದ್ದ ಚಿಕ್ಕ ಕೊಠಡಿಯಲ್ಲಿ ಎಲ್ಲರೂ ಮಲಗಿ, ಜ್ವರದಿಂದ ನಡುಗುತ್ತ ಚಡಪಡಿಸುತ್ತಿದ್ದರು. ಶ್ರೀಮಾತೆಯವರ ಚಿಂತೆಗೆ ಕೊನೆಯಿಲ್ಲದಂತಾಯಿತು. ''ತಾಯಿ! ಇದೇನಾಗಿ ಹೋಯಿತು! ಹುಡುಗರೆಲ್ಲ ಮಲಗಿ ನರಳುತ್ತಿದ್ದಾರಲ್ಲ'' ಎಂದು ವಿಲಾಪಿಸುತ್ತಿದ್ದರು. ಆಗಾಗ ಬಂದು ಬಾಗಿಲ ಹೊರಗೆ ನಿಂತು ಎಲ್ಲರನ್ನೂ ನೋಡಿ ಹೋಗುತ್ತಿದ್ದರು. ಜಯರಾಂಬಾಟಿಯಲ್ಲಿ ಆಗ ಹಾಲು ಸಿಗುವುದು ಕಷ್ಟವಾಗಿತ್ತು. ಶ್ರೀಮಾತೆ ತಾವೇ ಸ್ವತಃ ಮನೆಮನೆ ಅಲೆದು ರೋಗಿಗಳ ಪಥ್ಯಕ್ಕೆಂದು (ಸಬ್ಬಕ್ಕಿ ಗಂಜಿಗೆ) ಒಂದು ಪಾವು ಅಥವಾ ಅರ್ಧ ಪಾವು— ಹೀಗೆ ಸಿಕ್ಕಿದಷ್ಟು ಹಾಲನ್ನು ಸಂಗ್ರಹಿಸಿ ತರುತ್ತಿದ್ದರು. ಕೆಲವು ದಿನಗಳಲ್ಲಿ ಎಲ್ಲರೂ ಜ್ವರದಿಂದ ಮುಕ್ತರಾಗಿ, ಅನ್ನ ತಿನ್ನುವ ಸ್ಥಿತಿಗೆ ಬಂದರು. ಅವರ ಆರೋಗ್ಯ ಸುಧಾರಣೆಗೋಸ್ಕರ ಶ್ರೀಮಾತೆಯವರು ದಿನವೂ ಹಿತ್ತಲ ಕೊಳದಲ್ಲಿ ತಮ್ಮ ತಮ್ಮಂದಿರ ನೆರವಿನಿಂದ ಬಲೆ ಬೀಸಿ ಮೀನು ಹಿಡಿಸಿ, ಮೀನಿನ ಸಾರು ತಯಾರು ಮಾಡುತ್ತಿದ್ದರು. ಹಿಂದೆ ಇವರಾರೂ ಇಂಥ ಮಲೇರಿಯಾದಿಂದ ನರಳಿರಲಿಲ್ಲ. ಆದ್ದರಿಂದ ಅವರಿಗೆ ಚೇತರಿಸಿಕೊಳ್ಳಲು ಅನೇಕ ದಿನಗಳೇ ಬೇಕಾದವು.

ಈ ನಡುವೆ ಅವರು ಕೆಲವು ಬಾರಿ ಕಾಮಾರಪುಕುರಕ್ಕೆ ಹೋಗಿ ಬಂದರು. ಅವರಿಗೆ ಊಟ ತಿಂಡಿಗೆ ಕಷ್ಟವಾಗುವುದೆಂದು ತಾಯಿಯವರು ಅಲ್ಲಿ ಒಂದು ದಿನಕ್ಕಿಂತ ಹೆಚ್ಚು ತಂಗಲು ಅನುಮತಿ ನೀಡಲಿಚ್ಛಿಸುತ್ತಿರಲಿಲ್ಲ. ಕಾಳೀಕೃಷ್ಣನ ಸ್ಮೃತಿಯಲ್ಲಿ ಹೀಗಿದೆ:

''ಅಲ್ಲಿ (ಕಾಮಾರಪುಕುರದಲ್ಲಿ) ಇರುವಾಗ ಒಂದು ಅಪೂರ್ವ ಪವಿತ್ರತೆ, ಶಾಂತಿ ಹಾಗೂ ಆನಂದಗಳಿಂದ ತುಂಬಿ ಹೋಗಿರುತ್ತಿದ್ದೆ. We are treading on holy ground. (ನಾವು ಪವಿತ್ರ ಭೂಮಿಯಲ್ಲಿ ಓಡಾಡುತ್ತಿದ್ದೇವೆ ಎಂಬುದನ್ನು ಅಕ್ಷರಶಃ ಅನುಭವಿಸುತ್ತಿದ್ದೆವು.) ಆ ಪರ್ಣಕುಟೀರದ ಮೋಹಕ ಶಕ್ತಿ ಅದೆಂಥದು! Tangible, virbrant and spirituality (ಪ್ರತ್ಯಕ್ಷ ಆಧ್ಯಾತ್ಮಿಕತೆಯಿಂದ ಅನುರಣಿತವಾಗಿರುವಂತೆ) ಭಾಸವಾಗುತ್ತಿತ್ತು. ಜಗತ್ತಿಗೆ ಅತೀತವಾದದ್ದು ಎಂದೆನಿಸುತ್ತಿತ್ತು. ಶ್ರೀರಘುವೀರನ ಹಾಗೂ ಶೀತಲಾದೇವಿಯ ಪೂಜೆ-ನೈವೇದ್ಯಾದಿಗಳು ಆಗ ಬಹಳ ನಿಷ್ಠೆಯಿಂದ, ಬಹಳ ಚೆನ್ನಾಗಿ ನಡೆಯುತ್ತಿದ್ದವು. ಅಣ್ಣ ರಾಮಲಾಲ, ಅಣ್ಣ ಶಿವು ಹಾಗೂ ಲಕ್ಷ್ಮೀ ದೀದಿ ಅಲ್ಲಿದ್ದರು. ಅವರೆಲ್ಲ ನಮಗೆ ಎಷ್ಟೊಂದು ಆದರೋಪಚಾರ ಮಾಡುತ್ತಿದ್ದರು! ಅಲ್ಲದೆ, ಶ್ರೀರಾಮಕೃಷ್ಣರ ಮಾತುಕತೆಗಳನ್ನು ಹೇಳಿ ಆನಂದಪಡಿಸುತ್ತಿದ್ದರು. ಹತ್ತಿರದಲ್ಲಿ ರಾಮಕೃಷ್ಣರ ಜೀವನಕ್ಕೆ ಸಂಬಂಧಿಸಿದ ಯಾವಯಾವ ಸ್ಥಳಗಳಿದ್ದವೋ ಅವುಗಳನ್ನೆಲ್ಲಾ ಸಂದರ್ಶಿಸುತ್ತಿದ್ದೆ ಮತ್ತು ಶ್ರೀರಾಮಕೃಷ್ಣರ ಕಾಲದವರು ಯಾರುಯಾರು ಇದ್ದರೋ ಅವರಿಂದ ಶ್ರೀರಾಮಕೃಷ್ಣರ ಬಗ್ಗೆ ಕೇಳಿ ತಿಳಿದುಕೊಳ್ಳುತ್ತಿದ್ದೆ. ಶ್ರೀರಾಮಕೃಷ್ಣರ ಸ್ನೇಹಿತ ಗಂಗಾವಿಷ್ಣು ಲಾಹಾ ಆಗ ಬದುಕಿದ್ದರು. ಹಾಲದಾರ ಪುಕುರದ ನೀರು ತುಂಬ ನಿರ್ಮಲವಾಗಿಯೂ, ಸ್ವಚ್ಛ

ವಾಗಿಯೂ ಇತ್ತು. ಎದೆಯಾಳದ ನೀರಿನಲ್ಲಿ ನಿಂತು ಸ್ನಾನ ಮಾಡುವಾಗಲಂತೂ, ಗಾಜಿನ ಮೂಲಕ ಕಂಡಂತೆ ಕಾಲಿನಡಿಯ ಮರಳೂ ಸಹ ಕಾಣುತ್ತಿತ್ತು. ಹಿತ್ತಿಲ ಕೊಳದ ಅಂಚಿನಲ್ಲಿ ಶ್ರೀರಾಮ ಕೃಷ್ಣರು ಸ್ವತಃ ತಮ್ಮ ಕೈಯಿಂದ ನೆಟ್ಟಿದ್ದ ಮಾವಿನ ಗಿಡ ದೊಡ್ಡದಾಗಿ ಬೆಳೆದಿತ್ತು. ಅವರು ಮಾವಿನ ಹಣ್ಣನ್ನು ತಿಂದು ಓಟೆಯನ್ನು ಬಿತ್ತಿದ್ದರು. ಆ ಮರದ ಹಣ್ಣು ತುಂಬ ಸಿಹಿಯಾಗಿತ್ತು! ಕಾಮಾರ ಪುಕುರದ ಜಿಲೇಬಿ ಹಾಗೂ ಮಿಠಾಯಿ, ಕಡಲೆಪುರಿಯೊಡನೆ ಅದನ್ನು ತಿನ್ನಲು ಎಷ್ಟೊಂದು ರುಚಿಯಾಗಿರುತ್ತಿತ್ತು! ಕಾಮಾರ ಪುಕುರದಿಂದ ಹಿಂತಿರುಗುವಾಗ ಅವುಗಳನ್ನು ಒಂದಷ್ಟು ಖರೀದಿಸಿಕೊಂಡೊಯ್ಯುತ್ತಿದ್ದೆವು. ಸೊಪ್ಪು-ತರಕಾರಿ ಇನ್ನೂ ಏನೇನು ಸಿಗುತ್ತಿತ್ತೋ ಅದನ್ನೂ ಸಹ ಸಂತೆಯಿಂದ ಕೊಂಡುಕೊಳ್ಳುತ್ತಿದ್ದೆವು.''

ಹೆಚ್ಚು ದಿನ ಜಯರಾಂಬಾಟಿಯಲ್ಲೇ ಇದ್ದರೆ ಶ್ರೀಮಾತೆಯವರ ಪರಿಶ್ರಮ ಹೆಚ್ಚಾಗುವುದೆಂದು ಭಾವಿಸಿ ಎಲ್ಲರೂ ಹಿಂದಿರುಗುವ ದಿನವನ್ನು ಶಾರದಾನಂದರು ನಿಶ್ಚಯಿಸಿದರು. ಆದರೆ ಶ್ರೀಮಾತೆ, 'ಇನ್ನೂ ಸ್ವಲ್ಪ ಗುಣವಾಗಲಿ, ಇನ್ನೂ ಸ್ವಲ್ಪ ಚೇತರಿಸಿಕೊಂಡು ಹೋಗಿ, ಇನ್ನೂ ಕೆಲವು ದಿನ ಇದ್ದು ಹೋಗಿ' ಎಂದೆಲ್ಲ ಒತ್ತಾಯಿಸತೊಡಗಿದರು. ಬಗೆಬಗೆಯಾಗಿ ಹೇಳಿ ಕೊನೆಗೆ ಅವರನ್ನು ಒಪ್ಪಿಸಲಾಯಿತು. ಹೊರಡುವ ದಿನ ಎಲ್ಲರೂ ತಿಂಡಿ-ತೀರ್ಥ ಮುಗಿಸಿ ಎತ್ತಿನ ಗಾಡಿಯನ್ನೇರಿದರು. ಶ್ರೀಮಾತೆಯವರನ್ನು ಬಿಟ್ಟು ದೂರ ಹೋಗುತ್ತಿರುವುದರಿಂದ ಎಲ್ಲರ ಹೃದಯ ವಿಷಣ್ಣವಾಗಿದ್ದವು. ಶ್ರೀಮಾತೆಯವರು ಅಶ್ರುಪೂರ್ಣ ನೇತ್ರಗಳಿಂದ ಹಿತ್ತಲ ಬಾಗಿಲ ಬಳಿ ಅವರನ್ನೇ ನೋಡುತ್ತಾ ನಿಂತಿದ್ದರು. ಗೋಲಾಪ್ ಮಾ ಮತ್ತು ಯೋಗಿನ್ ಮಾ ಕೂಡ ಅಳುತ್ತಿದ್ದರು. ಕಾಳೀಕೃಷ್ಣನೂ ತನ್ನ ಕಂಬನಿಯನ್ನು ತಡೆಯದಾದ.

ಗಾಡಿಗಳು ಹೊರಟವು. ಶ್ರೀಮಾತೆಯವರು ಕೊಂಚ ದೂರದಲ್ಲಿ ಇವರನ್ನು ಹಿಂಬಾಲಿಸುತ್ತಾ ಬಂದರು. ಮತ್ತೆಮತ್ತೆ ಕೇಳಿಕೊಂಡರೂ ಅವರು ಹಿಂತಿರುಗುತ್ತಿಲ್ಲ. ಗಾಡಿಯು ಮುಂದುವರಿದು ಗ್ರಾಮದ ಹೊರಗಿನ ವಿಶಾಲವಾದ ಮೈದಾನಕ್ಕಿಳಿಯಿತು. ಕಾಳೀಕೃಷ್ಣನು ಗಾಡಿಯ ತಡಿಕೆಯ ಮೂಲಕ ನೋಡಿದಾಗ ಶ್ರೀಮಾತೆ ತಾಲಪುಕುರದ ಅಂಚಿನಲ್ಲಿ ಗಾಡಿಯತ್ತ ಮುಖಮಾಡಿಕೊಂಡೇ ನಿಂತಿದ್ದರು. ಕ್ರಮೇಣ ತಾಯಿಯ ದೃಷ್ಟಿಪಥದಿಂದ ಗಾಡಿ ಮರೆಯಾಯಿತು. ಅವರೆಲ್ಲರೂ ನರದೇಹಧಾರಿಣಿಯಾದ ಭಗವತಿಯ ಆ ಅಲೌಕಿಕ ಕರುಣೆಯ ಸ್ಮೃತಿಯನ್ನು ತಮ್ಮ ಹೃದಯದಲ್ಲಿಟ್ಟುಕೊಂಡೇ ಮುನ್ನಡೆದರು. ಕಾಳೀಕೃಷ್ಣನು ಇದುವರೆಗೂ ತನ್ನ ಹೆತ್ತ ತಾಯಿಯನ್ನಷ್ಟೇ ಕಂಡಿದ್ದ. ಈಗ ಜನ್ಮಜನ್ಮಾಂತರದ ತಾಯಿ ಅವನ ಜೀವನಪಥದಲ್ಲಿ ಬಂದರು. ವಿಶ್ವದ ವಾತ್ಸಲ್ಯವೆಲ್ಲವೂ ಈ ಮಹಾಮಾತೆಯಲ್ಲಿ ಘನೀಭೂತವಾದಂತಿತ್ತು. ಅವರ ಆಕರ್ಷಣೆಯು ಅಪರಿಮಿತವಾಗಿತ್ತು. 

# ಶ್ರೀಮಾತೆಯವರ ಪತ್ರಗಳು -೩

ಅನುವಾದ: **ಪ್ರವ್ರಾಜಿಕಾ ಧರ್ಮಪ್ರಾಣಾ**



**ಪತ್ರ-೭ ಶ್ರೀ ಮಹೇಂದ್ರನಾಥ ಗುಪ್ತರಿಗೆ**

ಶ್ರೀ ಶ್ರೀ ಗುರುದೇವ ಕೃಪೆ

೧೪ನೇ ಶ್ರಾವಣ

(Postal date —೩೧ ಜುಲೈ , ೧೮೯೪)

ಮೊದಲು ಪರಮ ಶುಭಾಶೀರ್ವಾದ ತಿಳಿಸಿ, ವಿಶೇಷ ವೇನೆಂದರೆ,

ಅಂಚೆಯ ಮೂಲಕ ನೀನು ಕಳುಹಿಸಿರುವ ೧೦ ರೂಪಾಯಿ ಮನಿಯಾರ್ಡರ್ ಸಿಕ್ಕಿತು. ಗೋದಿ (ಮಹೇಂದ್ರ ನಾಥ್ ಗುಪ್ತರ ಪುತ್ರಿ) ಯ ವಿವಾಹದ ಬಗ್ಗೆ ಬರೆದಿರುವೆ. ಆದರೆ ಅಸಮಯದಲ್ಲಿ ನಿಶ್ಚಯಿಸಿರುವೆ. ಮಗಳ ವಿವಾಹದ ಜವಾಬ್ದಾರಿಯನ್ನು ಪೂರೈಸಲು ಶುಭಾಶುಭ ಸಮಯವೆಂದು ನೋಡದಿದ್ದರೂ ಸರಿಯಾದ ವರ ಸಿಕ್ಕಿದರೆ ಮಾತ್ರ ವಿವಾಹ ನಡೆಸು. ಪುತ್ರಿ ವಯಸ್ಸಿಗೆ ಬಂದಿರುವುದರಿಂದ ಸಮಯಾಸಮಯ ನೋಡುವ ಆವಶ್ಯಕತೆ ಇಲ್ಲ. ಮತ್ತು ಅಭಯನಿಗೆ ಹೇಳು, ರಾಮಲಾಲನು ಅವನ ಕೈಯಲ್ಲಿ ಒಂದು ಪಂಚಾಂಗವನ್ನು ಕಳುಹಿಸಿದ್ದನಂತೆ. ಆ ಪಂಚಾಂಗ ಎಲ್ಲಿ ಎಂದು ಉತ್ತರ ಬರೆಯಬೇಕೆಂದು ಹೇಳು.

ನನ್ನ ಆಶೀರ್ವಾದ,

— ತಾಯಿ

*ಪತ್ರ ಪತ್ರಪಡೆದವರ ಹೆಸರು*

*ಮಹೇಂದ್ರನಾಥ ಗುಪ್ತ*

**ಪತ್ರ ೮ ಶ್ರೀ ಮಹೇಂದ್ರನಾಥ ಗುಪ್ತರಿಗೆ**

ಶ್ರೀ ಶ್ರೀ ಕಾಳಿಯ ಕೃಪೆ

ದಿನಾಂಕ ೨೫ನೇ ಶ್ರಾವಣ

(Postal date —೧೫, ಆಗಸ್ಟ್, ೧೮೯೫)

ದೀರ್ಘಾಯುವಾಗು.

ಪ್ರಥಮವಾಗಿ ಶುಭಾಶೀರ್ವಾದಗಳನ್ನು ತಿಳಿಸಿ, ವಿಶೇಷ ವೇನೆಂದರೆ,

ಮಗೂ, ಇಷ್ಟು ದಿನ ನಿನಗೆ ಪತ್ರ ಬರೆಯಲಾಗಲಿಲ್ಲ. ಏಕೆಂದರೆ ವರದನ (ಶ್ರೀಮಾತೆಯವರ ಸಹೋದರ) ವಿವಾಹದ ಗದ್ದಲದಲ್ಲಿದ್ದೆ. ನೀನು ಹಣ ಕಳುಹಿಸಿದ್ದೆ. ಅದು ಅನೇಕ ದಿನಗಳ ಹಿಂದೆಯೇ ಸಿಕ್ಕಿತು. ಆದರೆ ಅದನ್ನು ತಿಳಿಸಲು ಸಮಯ ಸಿಗಲಿಲ್ಲ. ಮನೆಯವರೆಲ್ಲರ ಸಮಾಚಾರ ಬರೆ. ಮಗಳು ಹೇಗಿದ್ದಾಳೆ? ಅವಳ ಸಮಾಚಾರವನ್ನು ತಿಳಿಸು. ನಾನು ಶಾರೀರಿಕವಾಗಿ ಚೆನ್ನಾಗಿದ್ದೇನೆ. ನಿಮ್ಮೆಲ್ಲರ ಕ್ಷೇಮದ ಬಗ್ಗೆ ತಿಳಿಸು. ಇಲ್ಲಿ ಮಳೆ ಬರಲೇ ಇಲ್ಲ. ಇವರೆಲ್ಲ.... ೨ನೇ ತಾರೀಖಿಗೆ ಹೊರಡುವರೆಂದು ಅಭಯನಿಗೆ ಹೇಳು. ಇಲ್ಲಿ ಎಲ್ಲವೂ ಕ್ಷೇಮ. ನಿನಗೆ ನನ್ನ ಆಶೀರ್ವಾದ. ಭಕ್ತರ ಕುಶಲ ಸಮಾಚಾರ ತಿಳಿಸು.

— ಇತಿ, ನಿನ್ನ ತಾಯಿ

*ಪತ್ರ ಪತ್ರಪಡೆದವರ ಹೆಸರು*

*ಮಹೇಂದ್ರನಾಥ ಗುಪ್ತ*

**ಪತ್ರ -೯ ಶ್ರೀ ಮಹೇಂದ್ರನಾಥ ಗುಪ್ತರಿಗೆ**

ಜೈ ರಾಮಕೃಷ್ಣ

(Postal date —೨೬.೧೧.೧೮೯೫)

ನನ್ನ ಪ್ರೀತಿಯ ಮಗನೆ,

ಪರಮ ಶುಭಾಶೀರ್ವಾದ ನೀಡಿ, ವಿಶೇಷವೇನೆಂದರೆ,

ನೀನು ಕಳುಹಿಸಿರುವ ೧೦ ರೂಪಾಯಿ ಸಿಕ್ಕಿತು. ಮಧುಪುರದಲ್ಲಿ ನಿನ್ನ ಮಕ್ಕಳು ಯಾರಿದ್ದಾರೆ ಮತ್ತು ಹೇಗಿದ್ದಾರೆ? ಅವರ

ಸಮಾಚಾರ ಸಿಕ್ಕಿದರೆ ನನಗೆ ತಿಳಿಸು. ಮತ್ತು ಜಯರಾಂಬಾಟಿಯಲ್ಲಿರುವ ನನ್ನ ತಾಯಿಗೆ ಒಂದು ಪತ್ರ ಬರೆ. ನಾನು ಈಗ ಕಾಮಾರಪುಕುರದಲ್ಲಿ ಇದ್ದೇನೆ. ಅಭಯ (ಶ್ರೀಮಾತೆಯವರ ಸಹೋದರ) ಹೇಗಿದ್ದಾನೆಂದು ಬರೆ. ನಾನು ದೈಹಿಕವಾಗಿ ಆರೋಗ್ಯವಾಗಿದ್ದೇನೆ. ಗೋಲಾಪ್ ಳಿಗೆ ಜ್ವರ ಬಂದಿತ್ತು. ಈಗ ಚೆನ್ನಾಗಿದ್ದಾಳೆ. ಅವಳು ಆದಷ್ಟು ಬೇಗ ಕಲ್ಕತ್ತೆಗೆ ಮರಳುವಳು. ಲಕ್ಷ್ಮಿ ಚೆನ್ನಾಗಿದ್ದಾಳೆ.

ಇತಿ, ದಿನಾಂಕ ೯, ಅಗ್ರಹಾಯಣ

ನಿನ್ನ ತಾಯಿ

ಮತ್ತೊಮ್ಮೆ: ಜಯರಾಂಬಾಟಿಯಲ್ಲಿ ಎಲ್ಲರೂ ಚೆನ್ನಾಗಿದ್ದಾರೆ.

ಅಕ್ಷಯ ಮಾಸ್ಟರ್‌ನ ಪ್ರಣಾಮ ಸ್ವೀಕರಿಸು. ಅವನು ನಿನಗೆ ಹೇಳಿರುವ ವಿಷಯವೆಂದರೆ, ಶ್ರೀರಾಮಕೃಷ್ಣರ ಮಾತುಗಳನ್ನು ಹೇಳಲು, ಅದನ್ನು ರಕ್ಷಿಸಿಡುವ ಬಗ್ಗೆ ಹೇಳಿದ್ದನು. ಅದೇ ರೀತಿ ಅವುಗಳನ್ನು ನೀನು ಸರಿಯಾಗಿ ಸಂರಕ್ಷಿಸಿ ಇಡು.

***ಪತ್ರ ಪತ್ರಪಡೆದವರ ಹೆಸರು***

*ಮಹೇಂದ್ರನಾಥ ಗುಪ್ತ*

### ಪತ್ರ - ೧೦ ಶ್ರೀ ಮಹೇಂದ್ರನಾಥ ಗುಪ್ತರಿಗೆ

ಓಂ ರಾಮ್

(Postal date —೫ ಏಪ್ರಿಲ್, ೧೮೯೭)
೨೨ನೇ ಚೈತ್ರ

ದೀರ್ಘಾಯುವಾಗು.

ಆಮೇಲೆ ಮಗೂ, ನಿನ್ನ ಪತ್ರ ಸಿಕ್ಕಿ ಎಲ್ಲಾ ಸಮಾಚಾರ ತಿಳಿದುಕೊಂಡೆ. ನನ್ನ ಕಾಲಿನ ಹುಣ್ಣು ಸಂಪೂರ್ಣವಾಗಿ ವಾಸಿಯಾಗಿದೆ. ಅದಕ್ಕಾಗಿ ನೀನು ಚಿಂತಿಸಬೇಡ. ಅಭಯ ಇಷ್ಟು ದಿನ ಇಲ್ಲಿ ಇರಲಿಲ್ಲ. ಆದುದರಿಂದ ಪತ್ರ ಬರೆಯಲು ತಡವಾಯಿತು. ಈಗ ಮನೆಯ ಬಾಡಿಗೆ ಕೊಡುವ ಆವಶ್ಯಕತೆ ಇಲ್ಲ. ಈಗ ನಾನು ತಣ್ಣೀರಿನಲ್ಲೇ ಸ್ನಾನ ಮಾಡುತ್ತಿದ್ದೇನೆ. ಇಷ್ಟು ದಿನ ಬಿಸಿನೀರಿನಲ್ಲಿ ಸ್ನಾನ ಮಾಡುತ್ತಿದ್ದೆ. ಅಭಯನಿಂದ ಕೇಳಿದೆ, ಸೊಸೆಗೆ (ಮಹೇಂದ್ರನಾಥರ ಪತ್ನಿ) ಕಾಯಿಲೆ ಆಗಿತ್ತೆಂದು. ಈಗ ಆರೋಗ್ಯ ಹೇಗಿದೆ ಎಂದು ಬರೆ. ಇಷ್ಟು ದಿನ ಕಾಮಾರಪುಕುರಕ್ಕೆ ಹೋಗಲೇ ಇಲ್ಲ. ಕಾಯಿಲೆಯಿಂದಿದ್ದೆ. ಇನ್ನು ಅಲ್ಲಿಗೆ ಹೋಗಬೇಕೆಂದುಕೊಂಡಿದ್ದೇನೆ. ನಿನ್ನ ಕೆಲಸದವನ ಮುಖಾಂತರ ಆಗಾಗ ಪ್ರಸನ್ನನ (ಶ್ರೀಮಾತೆಯವರ ಹಿರಿಯ ಸಹೋದರ) ಬಗ್ಗೆ ವಿಚಾರಿಸುತ್ತಿರು. ಏಕೆಂದರೆ ಅವನು ಅಲ್ಲಿ ಏಕಾಂಗಿಯಾಗಿ ಇದ್ದಾನೆ. ಮತ್ತು ಶಾರದನಿಗೆ (ಸ್ವಾಮಿ ತ್ರಿಗುಣಾತೀತಾನಂದ) ಕುರು ಆಗಿತ್ತೆಂದು ಕೇಳಿ ತುಂಬಾ ಸಂಕಟವಾಯಿತು. ಏಕೆಂದರೆ ಅದು ತುಂಬಾ ನೋವನ್ನುಂಟುಮಾಡುತ್ತದೆ. ಶಶಿ ಡಾಕ್ಟರ್‌ನ ಔಷಧದಿಂದ ಸಂಪೂರ್ಣ ವಾಸಿಯಾಗಿದೆ. ಈ ಸಮಾಚಾರವನ್ನು ಯೋಗೇನ್‌ಗೆ (ಸ್ವಾಮಿ ಯೋಗಾನಂದ) ತಿಳಿಸು. ಸದ್ಯ ಎಲ್ಲರಿಗೂ ಕ್ಷೇಮ.

ಇತಿ, ನಿನ್ನ ತಾಯಿ

***ಪತ್ರ ಪತ್ರಪಡೆದವರ ಹೆಸರು***

*ಮಹೇಂದ್ರನಾಥ ಗುಪ್ತ*

### ಪತ್ರ - ೧೧ ನಿಕುಂಜಾದೇವಿಗೆ

ಇದು ಮಹೇಂದ್ರನಾಥ ಗುಪ್ತನ ಪತ್ನಿ ನಿಕುಂಜಾದೇವಿಗೆ ಶ್ರೀಮಾತೆಯವರು ಬರೆದ ಪತ್ರ. ನಿಕುಂಜಾದೇವಿ ಮಾನಸಿಕ ರೋಗದಿಂದ ನರಳುತ್ತಿದ್ದಳು. ಅವಳು ಶ್ರೀಮಾತೆಯವರ ಮೇಲೆ ಅತ್ಯಂತ ಭಕ್ತಿ, ಶ್ರದ್ಧೆಯಿಂದಿದ್ದಳು. ಶ್ರೀಮಾತೆಯವರೂ ಅವಳನ್ನು ಸೊಸೆ ಎಂದು ಕರೆದು ಪ್ರೀತಿಸುತ್ತಿದ್ದರು.

ಶ್ರೀರಾಮ

(Postal date —೨೧ ಏಪ್ರಿಲ್, ೧೮೯೭)

೫ನೇ ವೈಶಾಖ

ಅಮ್ಮ ನಿಕುಂಜ,

ನಿನ್ನ ಪತ್ರ ಸಿಕ್ಕಿ ಸಮಾಚಾರವನ್ನೆಲ್ಲ ತಿಳಿದುಕೊಂಡೆ. ಇದುವರೆಗೆ ನಿನ್ನ ಕಾಯಿಲೆ ವಾಸಿಯಾಗಿಲ್ಲ ಎಂದು ಕೇಳಿ ಅತ್ಯಂತ ದು:ಖದಿಂದಿದ್ದೇನೆ. ಇನ್ನು ಯಾವ ಔಷಧದಿಂದ ರೋಗ ಕಡಿಮೆಯಾಗುವುದೋ ಅದನ್ನೇ ಮಾಡುತ್ತಿರು. ತಾಯಿ, ನೀನು ಈ ಕಾಯಿಲೆ ಇರುವಾಗ ಬೆಂಕಿಯ ಹತ್ತಿರ ಹೋಗಬೇಡ. ಏಕೆಂದರೆ ಅದರಿಂದ ವಾಸಿಯಾಗಲು ಸಾಧ್ಯವಲ್ಲ.

ಅಂತೆಯೇ, ನೀನು ಇಲ್ಲಿಗೆ ಬರುವ ಬಗ್ಗೆ ಕೇಳಿದೆ. ಆದರೆ ತಾಯಿ, ಈ ಸಮಯ ತುಂಬಾ ಸೆಖೆಯಿದೆ. ಸ್ವಲ್ಪ ಗುಣಮುಖಳಾಗು. ಆಮೇಲೆ ಬರುವಿಯಂತೆ.

— ನಿನ್ನ ಮಾತೆ,

ಶಾರದಾ

(ಜೊತೆಯಲ್ಲಿ ಮಹೇಂದ್ರನಾಥರಿಗೆ ಬರೆದಿರುವುದು:)

ಮಾಸ್ಟರ್ ಮಹಾಶಯ, ನೀನು ಸೊಸೆಗೆ ಉತ್ತಮವಾದ ಚಿಕಿತ್ಸೆ ಕೊಡಿಸು. ಅದೇರೀತಿ, ಅವಳಿಗೆ ಔಷಧಿ ತಿನ್ನಲೂ ಹೇಳಬೇಕು. ಇತಿ, ನಿನಗೆ ನನ್ನ ಆಶೀರ್ವಾದಗಳು. ನಾನು ಚೆನ್ನಾಗಿದ್ದೇನೆ.

***ಪತ್ರ ಪತ್ರಪಡೆದವರ ಹೆಸರು***

*ನಿಕುಂಜಾ ದೇವಿ*

---

## ಭಾರತೀಯ ನಾರಿಯರ ಮುಂದಾಳು

# ಸರಳಾದೇವಿ ಚೌಧುರಾಣಿ

ಸಂಗ್ರಹ: **ಸ್ವರ್ಣಗೌರಿ**

ಸ್ವಾಮಿ ವಿವೇಕಾನಂದರಿಂದ ಪ್ರೇರಣೆ ಪಡೆದು ವಿವಿಧ ಕ್ಷೇತ್ರಗಳಲ್ಲಿ ಅಸಾಧಾರಣ ಕಾರ್ಯವನ್ನೆಸಗಿದ ಮಹಿಳೆಯರ ಸಂಕ್ಷಿಪ್ತ ಜೀವನ ಚರಿತ್ರೆಗಳನ್ನೊಳಗೊಂಡ ಚಿಕ್ಕ ಕೃತಿ 'Swami Vivekananda : The Great Inspirer.' ಇದನ್ನು ರಾಮಕೃಷ್ಣ ಶಾರದಾ ಮಿಷನ್ ಪ್ರಕಟಿಸಿದೆ. ಈ ಕೃತಿಯಿಂದ ಆಯ್ದ ಕೆಲವು ಮಂದಿ ಸಾಧಕಿಯರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು 'ವಿವೇಕಪ್ರಭ'ದಲ್ಲಿ ಪ್ರಕಟಿಸಲಾಗುವುದು. ಇದನ್ನು ಸಂಗ್ರಹಿಸಿ, ಅನುವಾದಿಸಿಕೊಟ್ಟ ಲೇಖಕಿ, ಮೈಸೂರು ಆಶ್ರಮದ ಭಕ್ತರು. ಅವರು ಹಲವು ಲೇಖನ, ಗ್ರಂಥಗಳನ್ನು ರಚಿಸಿದ್ದಾರೆ.

**ಸು**ಪ್ರಸಿದ್ಧ ಬಂಗಾಳಿ ಕವಿ ರವೀಂದ್ರನಾಥ ಠಾಗೋರರ ಹಿರಿಯಕ್ಕ ಹಾಗೂ ದೇವೇಂದ್ರನಾಥ ಠಾಗೋರರ ಜ್ಯೇಷ್ಠ ಪುತ್ರಿ ಸ್ವರ್ಣಕುಮಾರಿ ದೇವಿ. ಬಂಗಾಳಿ ಸಾಹಿತ್ಯ ಕ್ಷೇತ್ರದಲ್ಲಿ ಪ್ರಥಮ ಮಹಿಳಾ ಕಾದಂಬರಿಕಾರಳೆಂಬ ಬಿರುದು ಪಡೆದಿದ್ದ ಸ್ವರ್ಣಕುಮಾರಿ ದೇವಿಯ ಪುತ್ರಿಯೇ ಸರಳಾದೇವಿ. ಈಕೆ ಕ್ರಿ.ಶ. ೧೮೯೦ರಲ್ಲಿ ಇಂಗ್ಲೀಷ್ ಸಾಹಿತ್ಯ ಬಿ.ಎ. ಪದವಿ ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ, ಕೋಲ್ಕತ್ತಾ ವಿಶ್ವವಿದ್ಯಾನಿಲಯದ 'ಪದ್ಮಾವತಿ ಚಿನ್ನದ ಪದಕ' ವನ್ನು ಪಡೆದಿದ್ದಳು. ೧೮೯೭ರಲ್ಲಿ ಸೈನಿಕರಿಗೆ ಅಂಗಸಾಧನೆಯ ತರಬೇತಿ ನೀಡಲು ಗರಡಿಮನೆ ಸ್ಥಾಪಿಸಿದಳು. ಕತ್ತಿವರಸೆ, ಲಾಠಿಪ್ರಯೋಗಗಳಲ್ಲಿ ಗೋವಾದ ಸುಪ್ರಸಿದ್ಧ ಮಲ್ಲನೊಬ್ಬನನ್ನು ನಿಯಮಿಸಿದಳು. ಬಾಗಾ ಜತಿನ್, ಬರೀಂದ್ರ ಕುಮಾರ್ ಘೋಷ್ ಮತ್ತು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯರಾಗಿದ್ದ ಶ್ರೀ ಅರವಿಂದರಿಗೆ ಇದು ಮುಂದೆ ಗೆರಿಲ್ಲಾ ಕಾಳಗಕ್ಕೆ ಪ್ರಜಾಸೈನ್ಯ ಕೂಡಿಸಲು ಒಂದು ಹೆಜ್ಜೆಯಾಯಿತು.

ಈ ಎಲ್ಲ ಕಾರ್ಯಗಳ ಹಿಂದೆ ಸರಳಾದೇವಿಯ ಗುರಿ ರಾಷ್ಟ್ರಪ್ರೇಮವನ್ನು ಜಾಗೃತಗೊಳಿಸಿ, ಬಂಗಾಳದ ರಾಷ್ಟ್ರಶಕ್ತಿಯನ್ನು ಪುನರುಜ್ಜೀವನಗೊಳಿಸುವುದಾಗಿತ್ತು. ಕ್ರಿ.ಶ. ೧೯೦೫ರಲ್ಲಿ ಆರ್ಯಸಮಾಜ ಹಾಗೂ ಕಾಂಗ್ರೆಸ್‌ನ ಸದಸ್ಯ ಮತ್ತು ಸಂಪಾದಕ ಪಂಡಿತ್ ರಾಮ್‌ಭುಜ್ ದತ್ತನೊಡನೆ ವಿವಾಹವಾಗಿ ಗೃಹಸ್ಥ ಜೀವನಕ್ಕೆ ಕಾಲಿಟ್ಟಳು ಸರಳಾದೇವಿ. ಈ ದಂಪತಿಗಳ ಪುತ್ರ ದೀಪಕ್ ದತ್ತನು ಮುಂದೆ ಮಹಾತ್ಮಾ ಗಾಂಧೀಜಿಯವರ ಮೊಮ್ಮಗಳಾದ ರಾಧಾಳನ್ನು ವರಿಸಿದನು. ಅಲಹಾಬಾದಿನಲ್ಲಿ ಸ್ತ್ರೀಶಿಕ್ಷಣ ಪ್ರಗತಿಗೆಂದು ಭಾರತದಲ್ಲೇ ಪ್ರಪ್ರಥಮವಾಗಿ ಕ್ರಿ.ಶ. ೧೯೧೦ರಲ್ಲಿ 'ಭಾರತ ಸ್ತ್ರೀ ಮಹಾಮಂಡಲ'ವೆಂಬ ಸ್ತ್ರೀಯರ ಸಂಘವನ್ನು ಸ್ಥಾಪಿಸಿದ ಕೀರ್ತಿ ಸರಳಾದೇವಿಗೆ ಸಲ್ಲುತ್ತದೆ. ಮುಂದೆ ಲಾಹೋರ್ (ಆಗ ಅದು ಭಾರತದ ಗಡಿಯಲ್ಲಿತ್ತು), ಅಲಹಾಬಾದ್, ದೆಹಲಿ, ಕರಾಚಿ, ಅಮೃತಸರ, ಹೈದರಾಬಾದ್, ಕಾನ್ಪುರ, ಬಂಕುರಾ, ಹಜಾರಿಭಾಗ್, ಮೇದಿನಿಪುರ ಹಾಗೂ



ಕೊಲ್ಕತ್ತಾದಲ್ಲಿ ಇದರ ಶಾಖೆಗಳು ಪಸರಿಸಿದವು. ಸರಳಾದೇವಿ 'ಭಾರತಿ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ, ಅದರಲ್ಲಿ ಸ್ವಾಮಿ ವಿವೇಕಾನಂದರನ್ನು ಕುರಿತು ಲೇಖನಗಳನ್ನು ಪ್ರಕಟಿಸಿದಳು. ಸ್ವಾಮಿ ವಿವೇಕಾನಂದರು ಒಮ್ಮೆ ಈಕೆಗೆ ಬರೆದ ಪತ್ರ ನಮಗೆ ಸರಳಾದೇವಿಯ ಹಿರಿಮೆಯನ್ನು ತಿಳಿಸುತ್ತದೆ:

''ಗೌರಾವಾನ್ವಿತ ತಾಯಿ,

ನೀವು ಕಳುಹಿಸಿದ 'ಭಾರತಿ' ಪತ್ರಿಕೆಗೆ ನನ್ನ ಕೃತಜ್ಞತೆಗಳನ್ನು ಸ್ವೀಕರಿಸಿ. ಯಾವ ಕಾರಣಕ್ಕಾಗಿ ನನ್ನ ಜೀವನವನ್ನು ಅರ್ಪಿಸಿರುವೆನೋ, ಅದು ನಿಮ್ಮಂತಹ ಪ್ರತಿಭಾವಂತ ಸ್ತ್ರೀಯರ ಮೆಚ್ಚುಗೆಗೆ ಪಾತ್ರವಾದ್ದರಿಂದ, ನಾನು ಅದೃಷ್ಟವಂತನೆಂದು ಭಾವಿಸುವೆ.

ಇಂತಹ ದುರದೃಷ್ಟವಂತ ದೇಶದಲ್ಲಿ, ಜೀವನ ಸಂಗ್ರಾಮದಲ್ಲಿ ಹೊಸ ಆಲೋಚನೆಗಳ ಪ್ರವರ್ತಕನನ್ನು ಪುರುಷರೇ

ಪ್ರೋತ್ಸಾಹಿಸುವುದು ವಿರಳವಾಗಿರುವಾಗ, ಇನ್ನು ಸ್ತ್ರೀಯರ ಮಾತೇನು? ಆದ್ದರಿಂದ ಭಾರತದೇಶದ ಪುರುಷರೆಲ್ಲರ ಕೈ ಚಪ್ಪಾಳೆಗಿಂತ ವಿದ್ಯಾವಂತ ಬಂಗಾಳಿ ಮಹಿಳೆಯ ಮೆಚ್ಚುಗೆಯು ಹೆಚ್ಚು ಮೌಲ್ಯವುಳ್ಳದ್ದು.

ಭಗವಂತನ ಕೃಪೆಯಿಂದ ನಿಮ್ಮಂತಹ ಸ್ತ್ರೀಯರ ಸಂಖ್ಯೆ ಈ ದೇಶದಲ್ಲಿ ಹೆಚ್ಚಲಿ ಹಾಗೂ ಅವರು ತಮ್ಮ ಮಾತೃಭೂಮಿಯ ಉದ್ಧಾರಕ್ಕಾಗಿ ಜೀವನವನ್ನು ಅರ್ಪಿಸುವಂತಾಗಲಿ.

'ಭಾರತಿ' ಪತ್ರಿಕೆಯಲ್ಲಿ ನನ್ನ ಕುರಿತು ನೀವು ಬರೆದಿರುವ ಲೇಖನ ಕುರಿತು ಕೆಲವು ವಿಷಯಗಳನ್ನು ಹೇಳಬೇಕಾಗಿದೆ... ನಮ್ಮಲ್ಲಿ ವೇದಾಂತದ ತತ್ತ್ವವಿದೆ, ಆದರೆ ಅದನ್ನು ಕಾರ್ಯರೂಪಕ್ಕೆ ತರುವ ಶಕ್ತಿಯಿಲ್ಲ. ಪುಸ್ತಕಗಳಲ್ಲಿ ವಿಶ್ವಮಾನವತೆಯ ಪದಗಳಿವೆ, ಆದರೆ ಕಾರ್ಯಾಚರಣೆಯಲ್ಲಿ ಬಹಳ ವ್ಯತ್ಯಾಸವನ್ನು ಕಾಣುತ್ತೇವೆ... ಆದರೂ ಪ್ರಸ್ತುತ ಪರಿಸ್ಥಿತಿಯನ್ನು ಆಧರಿಸಿಯೇ ನಾವು ಕೆಲಸದಲ್ಲಿ ಮುಂದುವರೆಯಬೇಕಾಗಿದೆ. ಬೇರೆ ದಾರಿಯೇ ಇಲ್ಲ. ಪ್ರತಿಯೊಬ್ಬರಲ್ಲೂ ಒಳಿತು, ಕೆಡುಕುಗಳನ್ನು ಗುರುತಿಸುವ ಶಕ್ತಿಯಿದೆ. ಕಷ್ಟ-ನಷ್ಟ, ದುಃಖ, ಸಂಕಟ, ಭ್ರಾಂತಿಗಳಿಂದ ಕೂಡಿದ ಈ ಸಂಸಾರದಲ್ಲಿ ಯಾರು ಒಂದು ಕೈಯಲ್ಲಿ ಇತರರ ಕಣ್ಣೀರು ಒರಸುತ್ತಾ, ಮತ್ತೊಂದು ಕೈಯಲ್ಲಿ ಬಿಡುಗಡೆಯ ಪಥವನ್ನು ತೋರುವನೋ ಆತನೇ ವೀರ ಪುರುಷ. ಒಂದೆಡೆ ನಿಷ್ಕ್ರಿಯ ದ್ರವ್ಯರಾಶಿಯಂತಿರುವ ಸಾಂಪ್ರದಾಯಿಕ ಸಮಾಜ, ಮತ್ತೊಂದೆಡೆ ಅಶಾಂತಿ, ಅಸಹನೆಗಳಿಂದ ಕೂಡಿರುವ ಬೆಂಕಿಯನ್ನೇ ಉಗುಳುತ್ತಿರುವ ಸಮಾಜ ಸುಧಾರಕ; ಇವೆರಡರ ನಡುವೆಯೇ ಒಳಿತಿನ ದಾರಿಯಿರುವುದು. ಜಪಾನ್ ದೇಶದಲ್ಲಿ ಹೆಣ್ಣುಮಕ್ಕಳು ತಮ್ಮ ಬೊಂಬೆಗಳನ್ನು ಹೃತ್ಪೂರ್ವಕವಾಗಿ ಪ್ರೀತಿಸಿದರೆ ಅವು ಸಜೀವವಾಗುತ್ತವೆ ಎಂಬ ನಂಬಿಕೆ ಪ್ರತೀತಿಯಲ್ಲಿದೆ ಎಂದು ಕೇಳಿದ್ದೇನೆ. ಜಪಾನಿನ ಹೆಣ್ಣುಮಕ್ಕಳು ತಮ್ಮ ಬೊಂಬೆಗಳನ್ನು ಎಂದೂ ಮುರಿಯರು. ಓ ಸೌಭಾಗ್ಯವಂತರೇ! ಅಜ್ಞಾನಿಗಳು, ಅಧಃಪತನವಾಗಿರುವವರು, ಹಸಿವಿನಿಂದ ಕಂಗೆಟ್ಟವರು, ಜಗಳಗಂಟರು, ಈರ್ಷ್ಯೆಯಿಂದ ಕೂಡಿದ, ಶ್ರೀಮಂತಿಕೆ ಹಾಗೂ ಅದೃಷ್ಟಗಳಿಂದ ವಂಚಿತರಾದ ನನ್ನ ದೇಶದ ಜನರನ್ನು ಯಾರಾದರೂ ಹೃದಯಪೂರ್ವಕವಾಗಿ ಪ್ರೀತಿಸಿದರೆ, ನನ್ನ ಭಾರತದೇಶವೂ ಮತ್ತೊಮ್ಮೆ ಜಾಗೃತವಾಗುವುದೆಂಬ ನಂಬಿಕೆ ನನಗಿದೆ. ನೂರಾರು ಉದಾರ ಮನಸ್ಸಿನ ಸ್ತ್ರೀಪುರುಷರಿಬ್ಬರೂ ಈ ಭೋಗಜೀವನದ ಲಾಲಸೆಯನ್ನು ತೊರೆದು, ಅಜ್ಞಾನ ಹಾಗೂ ದರಿದ್ರತೆಯ ಕೂಪದಲ್ಲಿ ಸಿಲುಕಿ ಕ್ರಮೇಣ ಮುಳುಗುತ್ತಿರುವ ಸಹಸ್ರಾರು ಜನರ ಒಳಿತನ್ನೇ ಹಾರೈಸುತ್ತಾ, ತಮ್ಮನ್ನೇ ತಾವು ಸಂಪೂರ್ಣವಾಗಿ ಅರ್ಪಿಸಿಕೊಂಡರೆ ಮಾತ್ರವೇ ಭಾರತದೇಶವು ಜಾಗೃತವಾಗುವುದು. ಸದುದ್ದೇಶ, ಪ್ರಾಮಾಣಿಕತೆ ಹಾಗೂ ಅನಂತ ಪ್ರೀತಿಯಿಂದ ಜಗತ್ತನ್ನೇ ಗೆಲ್ಲಬಹುದೆಂದು ನಾನು ನನ್ನ ಅಲ್ಪ ಜೀವನದ ಅನುಭವದಿಂದ ಹೇಳಬಲ್ಲೆ. ಸಹಸ್ರಾರು ಆಷಾಢಭೂತಿಗಳ ಹಾಗೂ ಚಂಡಾಲರ ದುರದೃಷ್ಟವನ್ನು ಇಂತಹ ಸದ್ಗುಣಗಳುಳ್ಳ ಒಂದೇ ಒಂದು ಜೀವಿಯು ಅಳಿಸಿಹಾಕಬಲ್ಲದು.

ಸದಾ ಕೃತಜ್ಞನಾದ ಹಾಗೂ ನಿಮ್ಮ ಒಳಿತಿಗಾಗಿ ಯಾವಾಗಲೂ ಭಗವಂತನಲ್ಲಿ ಮೊರೆಯಿಡುವ,

— ವಿವೇಕಾನಂದ

''ನೀವು ಸ್ತ್ರೀಪುರುಷರನ್ನು ಅಳೆಯುವಾಗ ಅವರವರ ಶ್ರೇಷ್ಠತೆಯ ದೃಷ್ಟಿಯಿಂದ ಅಳೆಯಿರಿ... ''

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೬, ಪು. ೧೭೪)*

**ಸ್ತ್ರೀಯರ ಸ್ಥಿತಿ ಉತ್ತಮವಾಗುವ ತನಕ ಪ್ರಪಂಚ ಉತ್ತಮವಾಗಲಾರದು. ಒಂದು ಹಕ್ಕಿ ಕೇವಲ ಒಂದೇ ರೆಕ್ಕೆಯ ಬಲದಿಂದ ಹಾರಲಾರದು.**

*— ಸ್ವಾಮಿ ವಿವೇಕಾನಂದ*

ಪುಸ್ತಕ ಪರಿಚಯ

# ನವೋತ್ಥಾನದ ಅಧ್ವರ್ಯುಗಳು

ಎಸ್. ಆರ್. ರಾಮಸ್ವಾಮಿ ಅವರ '**ನವೋತ್ಥಾನದ ಅಧ್ವರ್ಯುಗಳು**' ಸ್ವಾತಂತ್ರ್ಯ ಸಿಗುವ ಮೊದಲಿನ ಒಂದು ಶತಮಾನದಲ್ಲಿ ನಮ್ಮದೇ ಆದ ರಾಷ್ಟ್ರಜೀವನವನ್ನು ಕಟ್ಟಿಕೊಳ್ಳುವ ಸ್ವಸ್ವರೂಪ ದೃಢೀಕರಣದ ಪ್ರಯತ್ನದ ಮುಂದಾಳುಗಳ ಕೆಲಸವನ್ನು ಗುರುತಿಸುವ ಪುಸ್ತಕ. ಪರಕೀಯರ ಆಳ್ವಿಕೆ, ಅನುಕರಣಶೀಲರಾದ ನಮ್ಮವರ ನಿರುತ್ಸಾಹ, ಹೆಚ್ಚೇಕೆ, ವಿರೋಧಗಳ ನಡುವೆ ಈ ಪ್ರವರ್ತಕರ ಸಾಧನೆ ಅಸಾಮಾನ್ಯ.

ಭೂಮಿಕೆಯಲ್ಲಿ ಲೇಖಕರು ಕ್ರಿಸ್ತಪೂರ್ವ ನಾಲ್ಕನೇ ಶತಮಾನದಿಂದ ಕೆಲವು ಶತಮಾನಗಳ ಗುಪ್ತರ ಸುವರ್ಣಯುಗ ಕೊನೆಗೊಂಡ ಅನಂತರ ೧೪ನೇ ಶತಮಾನದ ವಿಜಯನಗರದ ಆಳ್ವಿಕೆಯ ತನಕ ಸಮಾಜ ಸ್ಥಗಿತವಾಗಿತ್ತು, ಅನಂತರ ಶಿವಾಜಿಯ ಕಾಲದಲ್ಲಿ ಸ್ವಲ್ಪಮಟ್ಟಿಗೆ ತಲೆ ಎತ್ತಿತು. ಅನಂತರ ಮತ್ತೆ ಸ್ಥಗಿತ ಪರ್ವ. ಔರಂಗಜೇಬನ ಕೊನೆಯ ದಿನಗಳಲ್ಲಿ ಆಳ್ವಿಕೆ ದುರ್ಬಲವಾದುದರ ಲಾಭ ಪಡೆದು, ಕಂಪನಿಯವರು ಸಂಸ್ಥಾನಗಳನ್ನು ಆಕ್ರಮಿಸಿಕೊಳ್ಳುತ್ತ ಇಡೀ ಭಾರತವನ್ನು ತಮ್ಮ ವಸಾಹತನ್ನಾಗಿಸಿದರು. ೧೭೫೭ರ ಪ್ಲಾಸಿ ಕದನ ನಿರ್ಣಾಯಕವಾಯಿತು. ಧರ್ಮದ ಮೇಲಿನ ಆಕ್ರಮಣ ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೆ ಎಡೆ ನೀಡಿತು. ವಿದೇಶೀ ಪ್ರಭುತ್ವದಿಂದ ಮುಕ್ತಗೊಳ್ಳಬೇಕೆಂಬ ತುಡಿತಕ್ಕಿಂತ ನಮ್ಮ ಧರ್ಮ, ಸಂಸ್ಕೃತಿಗಳನ್ನು ಉಳಿಸಿಕೊಳ್ಳಬೇಕೆಂಬ ಹಂಬಲ ಹೆಚ್ಚಿತ್ತು. ಆದರೂ ಮ್ಲೇಚ್ಛರ ಪ್ರಭುತ್ವ ಮುನ್ನೂರು ವರ್ಷಗಳು ಮುಂದುವರಿಯಿತು. ಬ್ರಿಟಿಷರು ಶಿಕ್ಷಣ, ಸಮಾಜ ಹಾಗೂ ಉದ್ಯಮಗಳನ್ನು ಧ್ವಂಸಗೊಳಿಸಿದರು. ವಿದೇಶೀ ಕಣ್ಣುಗಳಿಂದ ತಮ್ಮನ್ನು ನೋಡಿಕೊಂಡು ಹೀನಾಯವಾಗಿ ಭಾವಿಸುವುದನ್ನು ಕಲಿಸಿದರು. ಮಾನವ ಪ್ರಗತಿಗೆ ಯೂರೋಪೀಯ ನೆಲಗಟ್ಟಿನದೊಂದೇ ದಾರಿ ಎಂಬ ಭ್ರಮೆ ಹರಡಿತು. ಈಗಲೂ ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆಯ ಮುಂದುವರಿಕೆಯಾಗಿ ಸೆಕ್ಯುಲರಿಸಂ ಚಲಾವಣೆಯಲ್ಲಿದೆ. ಈ ಹಿನ್ನೆಲೆಯಲ್ಲಿ ರಾಮಮೋಹನರಾಯ್‌ನಿಂದ ಮೊದಲಾಗಿ, ಅರವಿಂದರ ವರೆಗೆ ಸ್ವಾತಂತ್ರ್ಯ ಹೋರಾಟವು ಧಾರ್ಮಿಕ ಪುನರ್ಜಾಗರಣದ ವ್ಯಾವಹಾರಿಕ ಅಭಿವ್ಯಕ್ತಿ ಎಂದು ಲೇಖಕರು ಗುರುತಿಸುತ್ತಾರೆ. ರಾಜನಾರಾಯಣ ಬೋಸ್, ಸುರೇಂದ್ರನಾಥ ಬ್ಯಾನರ್ಜಿ, ಗಾಜುಲು ಲಕ್ಷ್ಮೀನರಸು ಚೆಟ್ಟಿ, ದಾದಾಭಾಯಿ ನವರೋಜಿ, ವಿ.ಓ. ಚಿದಂಬರಂ ಪಿಳ್ಳೈ ಮೊದಲಾದವರ ಕೊಡುಗೆಯನ್ನು ಸಂಕ್ಷಿಪ್ತವಾಗಿ ಚಿತ್ರಿಸಿದ್ದಾರೆ.

ವೇದಾಂತ ದರ್ಶನವನ್ನು ಅಧ್ಯಯನ ಮಾಡಿದ್ದ ರಾಮಮೋಹನ ರಾಯ್ ಚಿಂತನೆ ಸ್ಫುಟವಾಗಿತ್ತು. ಒಂದೂವರೆ ಸಾವಿರ ವರ್ಷಗಳಿಂದ ಕ್ಷಾತ್ರ ವೃತ್ತಿಯನ್ನು ದುರ್ಲಕ್ಷಿಸಿ, ತನ್ನ ಸ್ವಾವಲಂಬನೆ, ಗತಿಶೀಲತೆಗಳನ್ನು ಕಳೆದುಕೊಂಡು ನಿಸ್ತೇಜವಾಗಿದ್ದ ಸಮಾಜ ವಿಸಂಘಟಿತವೂ, ಆಂತರಿಕವಾಗಿ ದುರ್ಬಲವೂ ಆಗಿತ್ತು. ವಿಗ್ರಹಾರಾಧನೆಯನ್ನು ವಿರೋಧಿಸಿ ಕುಟುಂಬದಿಂದ ಹೊರ ಹಾಕಿಸಲ್ಪಟ್ಟ ರಾಯ್ ನಾಲ್ಕು ವರ್ಷ ಟಿಬೆಟ್ ಮೊದಲಾದ ಕಡೆ ಸಂಚಾರದಲ್ಲೇ ಇದ್ದರು. ಮೇಧಾವಿಯಾದ ಅವರಿಗೆ ಸರಕಾರದಲ್ಲಿ ಜಿಲ್ಲಾ ಕಲೆಕ್ಟರ್ ಹುದ್ದೆ, ರಾಜಾ ಬಿರುದು ಸಿಕ್ಕಿತು. ಹತ್ತು ವರ್ಷ ಕೆಲಸ ಮಾಡಿ, ಧನಸಂಗ್ರಹಿಸಿ ಅನಂತರ ಬ್ರಹ್ಮಸಮಾಜ ಸ್ಥಾಪಿಸಿ ಸಮಾಜ ಜಾಗೃತಿಗೆ ಶ್ರಮಿಸಿದರು. ೧೮೨೯ರಲ್ಲಿ ಸತಿ ಪದ್ಧತಿಯನ್ನು ಸರಕಾರ ಹಾಗೂ ಸಮಾಜದ ಸಹಕಾರದಿಂದ ತೊಡೆದು ಹಾಕಿದರು. ಕ್ರೈಸ್ತ, ಇಸ್ಲಾಂ ಮತಗಳನ್ನು ಆಳವಾಗಿ ಅಧ್ಯಯನ ಮಾಡಿದ ರಾಯ್ ಮಿಷನರಿ ಪ್ರಚಾರದ ವಿಕೃತಿಗಳ ವಿರುದ್ಧ ಹೋರಾಡಿದರಲ್ಲದೆ ವಿಚಾರಗಮ್ಯ ಹಿಂದೂ ಧರ್ಮ ಸ್ಥಾಪನೆಗೆ ಪ್ರಯತ್ನಿಸಿದರು. ಆಧುನಿಕ ವಿಜ್ಞಾನಶಿಕ್ಷಣದ ಪರವಾಗಿದ್ದರು. ಇಂಗ್ಲೆಂಡಿನ ಸಂಸದೀಯ ತಜ್ಞ ಸಮಿತಿಯ ಆಹ್ವಾನದಂತೆ ನ್ಯಾಯಾಂಗ, ಆರ್ಥಿಕ ಹಾಗೂ ರಾಜಕೀಯ ಸುಧಾರಣೆಗಳ ಬಗ್ಗೆ ಸೂಚನಾವಳಿಯನ್ನು ನೀಡಿದ್ದರು. ತಮ್ಮ ಅಭಿಪ್ರಾಯ ಪ್ರಕಟನೆಗಾಗಿ ಪತ್ರಿಕೆಗಳನ್ನು, ಮುದ್ರಣಾಲಯವನ್ನು ಸ್ಥಾಪಿಸಿ, ಪತ್ರಿಕೆಯ ನಿರ್ಬಂಧಗಳ ವಿರುದ್ಧ ಹೋರಾಡಿದರು. ಬ್ರಿಟಿಷರ ಪರವಾಗಿ ದೆಹಲಿ ಸುಲ್ತಾನನ ಜತೆ ದೌತ್ಯ ನಡೆಸಿದರು. ಬ್ರಿಟಿಷ್ ಪ್ರಭುತ್ವದ ಆಹ್ವಾನದ ಮೇರೆ ಇಂಗ್ಲೆಂಡಿಗೆ ಹೋದ ಪ್ರಜ್ವಲ ನವಭಾರತದ ಹರಿಕಾರ ರಾಯ್ ಅಲ್ಲೇ ತೀರಿಕೊಂಡರು.




*ಕೃತಿ*
**ನವೋತ್ಥಾನದ ಅಧ್ವರ್ಯುಗಳು**
*ಲೇಖಕರು*
**ಎಸ್.ಆರ್. ರಾಮಸ್ವಾಮಿ**
*ಪ್ರಕಾಶಕರು*
**ರಾಷ್ಟ್ರೋತ್ಥಾನ ಸಾಹಿತ್ಯ, 'ಕೇಶವಶಿಲ್ಪ', ಕೆಂಪೇಗೌಡನಗರ, ಬೆಂಗಳೂರು – 560 019**
*ಪುಟಗಳು* : **284**
*ಬೆಲೆ* : **200/-**

ಶ್ರೀ ರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರ ಬಗೆಗೆ ಶ್ರೀ ರಾಮಸ್ವಾಮಿಯವರ ಒಲವು ಅವರ 'ವಿವೇಕಾನಂದ ಸಂದೇಶ ಕೌಮುದಿ' ಮತ್ತು ಇತರ ಗ್ರಂಥಗಳಲ್ಲಿಯೂ ವಿವರವಾಗಿ ಪ್ರಕಟವಾಗಿದೆ. ಎಲ್ಲ ಸುಧಾರಣೆಗೆ ಸಮರ್ಥ ಮಾಧ್ಯಮವೆಂದರೆ ಹೃದಯ ಪರಿವರ್ತನೆ ಎಂಬುದನ್ನು ಶ್ರೀರಾಮಕೃಷ್ಣರು ಮಂಡಿಸಿದ ವಿವರ, ಅನುಭವಕ್ಕೆ ಅವರು ಕೊಟ್ಟ ಒತ್ತು, ಸಮನ್ವಯ ಪ್ರಜ್ಞೆ, ಆಧುನಿಕ ಶಿಕ್ಷಣದ ವ್ಯರ್ಥತೆ ಮತ್ತು ಧನದಾಹಗಳು ಅವನತಿಗೆ ಕಾರಣ ಎಂಬ ಅರಿವು, ಸೇವೆಯ ಬಗ್ಗೆ ಅದೂ ಸಾಧನೆಯೆ ಎನ್ನುವ ಅವರ ನುಡಿ 'ಶಿವಜ್ಞಾನೇ ಜೀವಸೇವಾ' – ಈ ಅಂಶಗಳನ್ನು ಇಲ್ಲಿ ವಿವರಿಸಿದ್ದಾರೆ. ಶ್ರೀರಾಮಕೃಷ್ಣರ ಶಿಷ್ಯ ಸ್ವಾಮಿ ವಿವೇಕಾನಂದರು ಮೇಲಿನ ವಿಚಾರಗಳನ್ನು ಕೃತಿಗೆ ತಂದುದಲ್ಲದೆ, 'ಪ್ರತಿಯೊಂದು ಆತ್ಮವೂ ಮೂಲಸ್ವರೂಪದಲ್ಲಿ ಪವಿತ್ರವಾದದ್ದು; ಸುಪ್ತವಾಗಿರುವ

ಈ ಪವಿತ್ರತೆಯನ್ನು ಜಾಗೃತಗೊಳಿಸಬೇಕಾದ್ದೇ ಈಗಿನ ಯುಗ ಧರ್ಮ' ಎಂಬ ತಮ್ಮ ಕಾಣ್ಕೆಯನ್ನು ಪ್ರಚಾರ ಮಾಡಿ, ಹಿಂದೂ ಧರ್ಮಕ್ಕೆ ಹೊಸ ಆಯಾಮ ನೀಡಿದರು. ಈ ಚಿಂತನೆಗಳ ಸಾಂದರ್ಭಿಕತೆಯನ್ನು ಸೂಚಿಸಿ, ಸ್ವಾಮೀಜಿ ಪಾಶ್ಚಾತ್ಯರಿಗೆ ಅರ್ಥವಾಗುವ ಹೊಸ ನುಡಿಗಟ್ಟಿನ ನಿರ್ಮಾಣ ಮಾಡಿದ್ದನ್ನು ವಿವರಿಸುವುದು ಈ ಲೇಖನದ ವೈಶಿಷ್ಟ್ಯ.

ಬ್ರಿಟಿಷರ ಅಸಹನೀಯ ದಮನಕಾರಿ ಆಳ್ವಿಕೆಯಲ್ಲಿ ಭಾರತೀಯರ ಆತ್ಮವಿಶ್ವಾಸ ನಿರ್ಮಾಣ, ಸಾಂಸ್ಕೃತಿಕ–ಆಧ್ಯಾತ್ಮಿಕ ಜೀವನದ ಪುನರ್ನಿರ್ಮಾಣ ಮಾಡಿದವರಲ್ಲಿ ಸ್ವಾಮಿ ದಯಾನಂದ ಸರಸ್ವತಿಯವರು ಮುಖ್ಯರು. ನಮ್ಮವರು ತಮ್ಮದಲ್ಲದ ಇನ್ನೊಂದು ಭಾಷೆ ಕಲಿಯಬೇಕು, ಸ್ವರಾಜ್ಯಕ್ಕೆ ಸುರಾಜ್ಯ ಪರ್ಯಾಯವಲ್ಲ, ಇಲ್ಲಿನ ಪರಂಪರೆಗೆ ಅನುಗುಣವಾದ ಆಡಳಿತ ಪದ್ಧತಿ ಇರಬೇಕು, ವೇದವೇ ಹಿಂದೂಧರ್ಮದ ಆಧಾರ ಸ್ತಂಭ ಎಂಬ ಸಮಾಜವನ್ನು ಒಗ್ಗೂಡಿಸುವ ದೂರದೃಷ್ಟಿಯ ಅಭಿಯಾನಸರಣಿಯನ್ನು ಪ್ರಾರಂಭಿಸಿದವರು ಸ್ವಾಮಿ ದಯಾನಂದ ಸರಸ್ವತಿ. ಅವರು ಸ್ಥಾಪಿಸಿದ ಆರ್ಯ ಸಮಾಜ ನಮ್ಮ ಸಮಾಜದ ಅನಿಷ್ಟ ಪದ್ಧತಿಗಳನ್ನು ಮೂಲೋತ್ಪಾಟನ ಮಾಡಲು ಶ್ರಮಿಸಿತು. ಇಂದಿಗೂ ಅಂತರ್ಮತೀಯ ವಿವಾಹ, ಮತಾಂತರಿತರನ್ನು ಮರಳಿ ಮಾತೃಧರ್ಮಕ್ಕೆ ಕರೆತರುವುದು ಮೊದಲಾದ ಕೆಲಸಗಳನ್ನು ಆರ್ಯಸಮಾಜ ನಡೆಸುತ್ತಿದೆ. ಅವರ 'ಸತ್ಯಾರ್ಥಪ್ರಕಾಶ' ಮತಾಂತರ, ಮಿಷನರಿಗಳ ಪ್ರಭಾವವನ್ನು ಎದುರಿಸಲು ಸಮಾಜಕ್ಕೆ ವೈಚಾರಿಕ ಕ್ಷಾತ್ರವನ್ನು ನೀಡಿತು. ಹಿಂದಿಯನ್ನು ಅತಿ ಸರಳಗೊಳಿಸಿ ಸ್ವದೇಶೀ ಸಿದ್ಧಾಂತವನ್ನು ಹರಡಿದರು. ಪ್ರಸಿದ್ಧಕಾಶೀವಾಕ್ಯಾರ್ಥದಲ್ಲಿ ಅಕ್ಷರೈಕನಿಷ್ಠಸಾಂಪ್ರದಾಯಿಕ ಪಂಡಿತರನ್ನು ಮಣಿಸಿ, ಜಾತಿವ್ಯವಸ್ಥೆಯ ಸುಧಾರಣೆಗೆ ಪ್ರಚಾರ ನೀಡಿದರು. ಸ್ವಾತಂತ್ರ್ಯ ಹೋರಾಟ ಹಾಗೂ ಸಮಾಜ ಸುಧಾರಣೆ ಒಟ್ಟಿಗೆನಡೆಯಬೇಕೆಂದುಪ್ರತಿಪಾದಿಸಿದರು. ವೇದಾರ್ಥಸಂಧಾನಕ್ಕೆ ಕೇವಲ ಭಾಷಾಜ್ಞಾನವಲ್ಲದೆ ಅಂತರ್ದೃಷ್ಟಿ ಅಗತ್ಯವಿದ್ದು, ದಯಾನಂದರು ಅದನ್ನು ಒದಗಿಸಿ ವಿದೇಶೀಯರ ವಿಕೃತ ಅರ್ಥನಿರ್ಣಯಗಳನ್ನು ತಳ್ಳಿಹಾಕಿದರು. ಸದಾ ವಾದವಿವಾದಗಳಲ್ಲಿ ತೊಡಗುತ್ತ, ಎಲ್ಲ ಪ್ರದೇಶಗಳ ವಿದ್ವಾಂಸರುಗಳ ಜೊತೆ ಚರ್ಚಿಸಿ, ಆರ್ಯ ಸಮಾಜವನ್ನು ವಿಸ್ತರಿಸುತ್ತ ರಾಷ್ಟ್ರವಿಗ್ರಹವನ್ನು ರೂಪಿಸಿದ ಸ್ವಾಮಿ ದಯಾನಂದರ ಚಿತ್ರಣ ಮನನೀಯವಾಗಿದೆ.

ಭಾರತೀಯರ ಧಾರ್ಮಿಕ ಆಧ್ಯಾತ್ಮಿಕ ಸಾಮಾಜಿಕ ಚೇತರಿಕೆ ಹಾಗೂ ಸ್ವಾಭಿಮಾನದ ಜಾಗೃತಿಯು ನವೋತ್ಥಾನಪರ್ವದ ಲಕ್ಷಣಗಳಾಗಿದ್ದು, ಈ ಎಚ್ಚರವನ್ನು ಸಮಾಜದಲ್ಲಿ ಹರಡಿದವರಲ್ಲಿ ಸ್ವಾಮಿ ರಾಮತೀರ್ಥರು ಒಬ್ಬರು. ವಿವೇಕಾನಂದರು ಸೇವಾಕಾರ್ಯಕ್ಕೆ ಒತ್ತು ನೀಡಿದರೆ, ದೇಶ, ದೇಶದ ಜನತೆಯೊಡನೆ ಐಕ್ಯತೆ ಸಾಧಿಸುವುದು ಮುಖ್ಯ ಎಂದವರು ರಾಮತೀರ್ಥರು. ವಿವೇಕಾನಂದರಂತೆಯೆ ರಾಮತೀರ್ಥರೂ ಭಾರತದೊಳಗಡೆ ಹಾಗೂ ಜಪಾನ್, ಅಮೆರಿಕಾ ಮೊದಲಾದ ದೂರದೇಶಗಳಲ್ಲೂ ಭಾರತೀಯ ಆಧ್ಯಾತ್ಮಿಕ ಸೌಗಂಧವನ್ನು ಪಸರಿಸಿ, ತಾರುಣ್ಯದಲ್ಲೇ ಬ್ರಹ್ಮಲೀನರಾದರು. ಈ ಲೇಖನದಲ್ಲಿ ಘಟನೆಗಳು ಹಾಗೂ ದೃಷ್ಟಾಂತ ಕತೆಗಳಿಗೆ ಪ್ರಾಶಸ್ತ್ಯವಿದ್ದು, ಆಕರ್ಷಕವಾಗಿದೆ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೀವ್ರಗಾಮಿಗಳ ಜೊತೆ ಸಂಬಂಧ ಹೊಂದಿದ್ದ ಕ್ರಾಂತಿಕಾರಿ ಅರವಿಂದರು ಪ್ರಭುತ್ವದೊಡನೆ ಅಸಹಕಾರ, ಪೂರ್ಣಸ್ವಾತಂತ್ರ್ಯಕ್ಕಾಗಿ ಆಗ್ರಹ, ವಿದೇಶೀ ವಸ್ತು ಬಹಿಷ್ಕಾರ, ನಿಃಶಸ್ತ್ರ ಪ್ರತಿರೋಧದ ಸಂದೇಶಗಳನ್ನು 'ಯುಗಾಂತರ', 'ವಂದೇ ಮಾತರಂ' ಪತ್ರಿಕೆಗಳ ಮೂಲಕ ಸತತವಾಗಿ ಪ್ರಕಟಿಸಿದರು. ಅವರ ಸೋದರ ಬಾರೀಂದ್ರರ ತಂಡದ ಕ್ರಾಂತಿಕಾರಿಗಳು ನ್ಯಾಯಾಧೀಶ ಕಿಂಗ್ಸ್‌ಫರ್ಡ್‌ನನ್ನು ಕೊಂದ ಮೊಕದ್ದಮೆಯಲ್ಲಿ ಬಿಡುಗಡೆಯಾದ ಮೇಲೆ ಪುದುಚೇರಿಗೆ ಹೋಗಿ ನೆಲೆಸಿ, ಅಧ್ಯಾತ್ಮ ಸಾಧನೆ, ವೈಚಾರಿಕ ಪಯಣದಲ್ಲಿ ತೊಡಗಿದರು. ಭಾರತಕ್ಕೆ ಆಧ್ಯಾತ್ಮಿಕತೆ ಮಾತ್ರ ತಾರಕವಾಗಬಲ್ಲುದು ಎಂದು ಕಂಡುಕೊಂಡರು.

ಪಂಡಿತ್ ಮದನ ಮೋಹನ ಮಾಲವೀಯ ಅವರು ನಾಲ್ಕು ದಶಕಗಳಷ್ಟು ದೀರ್ಘಕಾಲ ಮುಂಚೂಣಿಯ ನಾಯಕರಲ್ಲಿ ಒಬ್ಬರಾಗಿದ್ದರು. ರಾಜಕಾರಣ, ಸಂಸ್ಕೃತಿ ಪ್ರಸಾರಗಳು ಅವರ ಉಸಿರಾಗಿದ್ದರೂ, ಅವರ ಮುಖ್ಯ ಕಾರ್ಯ ಬನಾರಸ್ ಹಿಂದೂ ವಿಶ್ವವಿದ್ಯಾಲಯ. ದೂರಗಾಮಿ ಚಿಂತನೆ, ಸುಧಾರಕ ದೃಷ್ಟಿ, ವಸ್ತುನಿಷ್ಠ ನಿಲುವು, ಜನಪರ ಚಿಂತನೆಗಳಿದ್ದ ಮಾಲವೀಯರ ಸಂದೇಶ 'ಈ ರಾಷ್ಟ್ರಕ್ಕೆ ಉತ್ತಮ ಭವಿಷ್ಯ ನೀಡಬಲ್ಲದ್ದು ಅನನ್ಯ ಧರ್ಮವಾದ ಹಿಂದೂ ಸಂಘಟನೆ ಮಾತ್ರ' ಎಂಬುದು. ಸನಾತನ ಧರ್ಮ ಪ್ರಸಾರ, ಗೋಸೇವೆ, ಅಸ್ಪೃಶ್ಯೋದ್ಧಾರ, ಸ್ವದೇಶೀ, ಹಿಂದೀ ಪ್ರಚಾರ, ಸಂಸ್ಕೃತ ಸಾಹಿತ್ಯ ಹಾಗೂ ಶಾಸ್ತ್ರಾಧ್ಯಯನದ ಪ್ರವರ್ತನೆ ಮುಂತಾದ ಎಲ್ಲ ಆಂದೋಲನಗಳಲ್ಲಿ ಮಾಲವೀಯರು ಕೆಲಸ ಮಾಡಿದುದನ್ನು ಲೇಖಕರು ವಿವರಿಸಿದ್ದಾರೆ.

ವಿಶ್ವಕವಿ ರವೀಂದ್ರನಾಥ ಠಾಕೂರರನ್ನು ನವೋತ್ಥಾನದ ಅಗ್ರಣಿ ಎಂದು ರಾಮಸ್ವಾಮಿಯವರು ಕರೆದಿದ್ದಾರೆ. ವಿಶಾಲ ಜನಸ್ಪಂದನ ಹೊಂದಿದ್ದ ರವೀಂದ್ರರಿಗೆ ಜಾಗತಿಕ ಮನ್ನಣೆ ಸಿಕ್ಕು, ಅವರನ್ನು ಭಾರತದ ಸಾಂಸ್ಕೃತಿಕ ರಾಯಭಾರಿ ಎಂದು ಪರಿಗಣಿಸಿದ್ದರು. ಭಾರತದ ಸಾಂಸ್ಕೃತಿಕ, ಸಾಹಿತ್ಯಿಕ, ವೈಚಾರಿಕ ಕ್ಷೇತ್ರಗಳಲ್ಲಿ ಇವರು ಅನುಪಮ ಕೊಡುಗೆ ನೀಡಿದುದನ್ನು ವಿವರಿಸಿ, ಆಧುನಿಕ ಭಾರತ ನಿರ್ಮಾಪಕರಲ್ಲಿ ಉನ್ನತ ಸ್ಥಾನ ಪಡೆದುದನ್ನು ಈ ಲೇಖನದಲ್ಲಿ ವಿವರಿಸಲಾಗಿದೆ.

ಈ ಎಂಟು ಮಹಾನ್ ಚೇತನಗಳ ವ್ಯಕ್ತಿ ಪರಿಚಯ, ಮಾಡಿದ ಕೆಲಸ, ನೀಡಿದ ಪ್ರೇರಣೆಗಳನ್ನು ವಿವರಿಸುವುದರ ಜೊತೆಗೆ, ಕೊನೆಯಲ್ಲಿ ಅವರ ಸೂಕ್ತಿಗಳು, ಜೀವನ ರೇಖೆಗಳನ್ನು ನೀಡಿ, ಅವರ ವ್ಯಕ್ತಿತ್ವದ ಪರಿಪೂರ್ಣ ನೋಟವನ್ನು ಸಂಕ್ಷಿಪ್ತವಾಗಿ ನೀಡಿ, ಲೇಖಕರು ಕನ್ನಡ ಓದುಗರಿಗೆ ಮಹದುಪಕಾರ ಮಾಡಿದ್ದಾರೆ. ಆಧುನಿಕ ಭಾರತದ ನಿರ್ಮಾತೃಗಳಾದ ಇಂತಹ ಧೀಮಂತ ವ್ಯಕ್ತಿಗಳ ಕೊಡುಗೆಯನ್ನು ಸ್ಮರಿಸುವುದು ಈಗಿನ ಅಗತ್ಯವೇ ಸರಿ. ಶ್ರೀ ರಾಮಸ್ವಾಮಿಯವರ ಶೈಲಿ ಅತಿ ಗಂಭೀರ. ಹೆಚ್ಚಾಗಿ ಬಳಕೆಯಲ್ಲಿಲ್ಲದ 'ಲಾಗೋಡು' ಮುಂತಾದ ಪದಗಳನ್ನು, ಪ್ರಯೋಗಗಳನ್ನು ಬಳಸಿ ಹೊಸತನವನ್ನು ತಂದಿದ್ದಾರೆ. ಸಂಸ್ಕೃತ ಭೂಯಿಷ್ಠತೆ ಸಾಮಾನ್ಯ ಓದುಗರಿಗೆ ಸ್ವಲ್ಪ ಕಷ್ಟಕರ.

*–ಡಾ. ಹೆಚ್.ಪಾಂಡುರಂಗ ವಿಠಲ*

# ಮಹಾನ್ ಭಕ್ತ – ಕುಲಶೇಖರ ಆಳ್ವಾರ್

ಸ್ವಾಮಿ ವೀರೇಶಾನಂದ



ವಿಷ್ಣುಭಕ್ತರು ಎಂದರೆ ಯಾರು? ಶ್ರೀಮದ್ಭಾಗವತವು ಹೀಗೆ ಹೇಳುತ್ತದೆ: ''ಓ ರಾಜನೇ, ಸತ್ಯಯುಗ ಮತ್ತು ಇತರ ಯುಗಗಳ ಜನರು ಕೂಡ ಈ ಕಲಿಯುಗದಲ್ಲಿ ಹುಟ್ಟುವುದಕ್ಕೆ ಇಚ್ಛಿಸುತ್ತಾರೆ. ಏಕೆಂದರೆ ಈ ಯುಗದಲ್ಲಿ ಪರಮಾತ್ಮನಾದ ಭಗವಾನ್ ನಾರಾಯಣನ ಭಕ್ತರು ಅಧಿಕಸಂಖ್ಯೆಯಲ್ಲಿ ಜನ್ಮವೆತ್ತುತ್ತಾರೆ. ಈ ಭಕ್ತರು ಅನೇಕ ಸ್ಥಾನಗಳಲ್ಲಿ ಹುಟ್ಟಿಬಂದರೂ, ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತಾರೆ. ಈ ಕಲಿಯುಗದಲ್ಲಿ ದ್ರಾವಿಡ ದೇಶದ ಪವಿತ್ರ ನದಿಗಳಾದ ತಾಮ್ರಪರ್ಣಿ, ಕೃತಮಾಲಾ, ಪಯಸ್ವಿನಿ, ಕಾವೇರಿ ಮುಂತಾದ ನದಿಗಳ ನೀರನ್ನು ಸೇವಿಸಿದ ಜನರಲ್ಲಿ ಬಹುತೇಕರು ದೇವಾಧಿದೇವ ಭಗವಾನ್ ವಾಸುದೇವನ ಪವಿತ್ರ ಹೃದಯರಾದ ಭಕ್ತರಾಗಿ ಪರಿವರ್ತನೆಗೊಳ್ಳುತ್ತಾರೆ.''

ದ್ರಾವಿಡದೇಶದ ವಿಷ್ಣುಭಕ್ತರನ್ನು ಆಳ್ವಾರರು ಎಂದು ಕರೆಯುತ್ತಾರೆ. ಸಾಂಪ್ರದಾಯಿಕರ ಪ್ರಕಾರ ತಮಿಳು ದೇಶದಲ್ಲಿ ಜನ್ಮತಳೆದ ಹನ್ನೆರಡು ಆಳ್ವಾರರು ಭಗವಾನ್ ಶ್ರೀಕೃಷ್ಣನ ಪಾರ್ಷದರು, ದೈವಾಂಶ ಸಂಭೂತರು. ತಮಿಳು ಭಾಷೆಯಲ್ಲಿ ಆಳ್ವಾರ್ ಎಂದರೆ 'ಭಗವದಾನಂದದಲ್ಲಿ ಅಥವಾ ಭಗವದ್ ತನ್ಮಯತೆಯಲ್ಲಿ ಮುಳುಗಿಹೋದವರು' ಎಂದರ್ಥ. ಈ ಆಳ್ವಾರರು ತಮಿಳು ಭಾಷೆಯಲ್ಲಿ ಅನೇಕ ಭಕ್ತಿಸ್ತೋತ್ರಗಳನ್ನು ರಚಿಸಿದರು. ಅವೆಲ್ಲ ತಾತ್ತ್ವಿಕವಾಗಿ ಉನ್ನತ ದರ್ಜೆಯವು. ಹಾಗಿದ್ದರೂ ಭಕ್ತಿಜಲದ ತಣ್ಣನೆಯ ಸುಖಸಿಂಚನ ಅವುಗಳಲ್ಲಿ ಕಾಣಬರುತ್ತದೆ. ನಾಲ್ಕು ಸಾವಿರದಷ್ಟು ಇರುವ ಈ ರಚನೆಗಳನ್ನು ಒಟ್ಟುಗೂಡಿಸಿ, 'ನಾಲಾಯಿರ ದಿವ್ಯಪ್ರಬಂಧ' ಎಂದು ಕರೆಯುತ್ತಾರೆ. ಇವುಗಳನ್ನು ವಿಶಿಷ್ಟಾದ್ವೈತ ಸಂಪ್ರದಾಯದಲ್ಲಿ ಸಂಸ್ಕೃತ ಭಾಷೆಯ ವೇದಗಳಿಗೆ ಇರುವಷ್ಟೇ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಈ ಸಂಪ್ರದಾಯದ ಮಹಾನ್ ಆಚಾರ್ಯರುಗಳಾದ ನಾಥಮುನಿ, ಯಾಮುನಾಚಾರ್ಯ, ರಾಮಾನುಜಾಚಾರ್ಯ, ವೇದಾಂತ ದೇಶಿಕ, ವೀರರಾಘವಾಚಾರ್ಯ— ಇವರೆಲ್ಲರೂ ಸಂಸ್ಕೃತ ವೇದಾಂತ ವಾಙ್ಮಯದಲ್ಲಿ ಘನವೆತ್ತ ಪಂಡಿತರಾಗಿದ್ದರು ಮಾತ್ರವಲ್ಲ , ದಿವ್ಯಪ್ರಬಂಧಗಳ ಆಳವಾದ ಅಧ್ಯಯನವನ್ನೂ ಮಾಡಿಕೊಂಡಿದ್ದರು. ಹೀಗಾಗಿ ಈ ಸಂಪ್ರದಾಯವನ್ನು 'ಉಭಯ–ವೇದಾಂತ ಸಂಪ್ರದಾಯ' ಎಂದೂ ಕರೆಯಲಾಗುತ್ತದೆ.

ಆಳ್ವಾರರುಗಳಲ್ಲಿ ಎಲ್ಲ ವರ್ಗದ ಜನರೂ ಇದ್ದಾರೆ. ಬಡವರಿದ್ದಾರೆ, ಧನಿಕರಿದ್ದಾರೆ ಮತ್ತು ರಾಜಕುಲೀನರೂ ಇದ್ದಾರೆ. ಸ್ವತಃ ರಾಜನಾಗಿದ್ದರೂ ಆಳ್ವಾರ್ ಎಂದು ಪೂಜಿಸಲ್ಪಟ್ಟ ಮಹಾನ್ ಭಕ್ತ ಕುಲಶೇಖರ ಆಳ್ವಾರ್. ಇವನ ಕಥೆಯನ್ನು ಕೇಳುವುದು ಶ್ರೀಕೃಷ್ಣ ಭಕ್ತಿಯ ಗಂಗೆಯಲ್ಲಿ ಸ್ನಾನಮಾಡಿದ ಅಪೂರ್ವ ಅನುಭವವನ್ನು ನೀಡುತ್ತದೆ; ಮನನ ಮಾಡುವುದೇ ಆ ಪರಮಾತ್ಮನ ದಿವ್ಯಧ್ಯಾನದಲ್ಲಿ ಮಗ್ನನಾಗುವ ಅಲೌಕಿಕ ಸುಖಾನುಭೂತಿಯನ್ನು ಉಂಟುಮಾಡುತ್ತದೆ.

ಕುಲಶೇಖರನು ಈಗಿನ ಕೇರಳ ರಾಜ್ಯದ ಭಾಗವಾಗಿದ್ದ ತಿರುವಾಂಕೂರು ರಾಜ್ಯದ ರಾಜಕುಲದಲ್ಲಿ ಹುಟ್ಟಿದ ಮಹಾನುಭಾವ. ಇಲ್ಲಿನ ರಾಜರು ಅಧಿಕೃತವಾಗಿ ಭೂಮಿಯ ಒಡೆಯರಾಗಿರಲಿಲ್ಲ. ರಾಜ್ಯವು ಆ ರಾಜಕುಲದ ದೈವವಾದ ಅನಂತಪದ್ಮನಾಭ ಸ್ವಾಮಿಯದ್ದೇ ಎಂದು ಅವರು ದೃಢವಾಗಿ ನಂಬಿದ್ದರು. ಈ ಸ್ವಾಮಿಯ ದೇಗುಲವು ಈಗಿನ ತಿರುವನಂತಪುರ ನಗರದ ಮಧ್ಯಭಾಗದಲ್ಲಿ ವಿರಾಜಮಾನವಾಗಿದೆ. ತಿರುವಾಂಕೂರು ರಾಜ್ಯದ ರಾಜರು ಪ್ರತಿದಿನವೂ ಎರಡು ಸಲ ಸ್ವಾಮಿಯ ಸನ್ನಿಧಿಗೆ ಬರುವರು. ಅನಂತಪದ್ಮನಾಭ ಸ್ವಾಮಿಗೆ ಪ್ರಣಾಮಗಳನ್ನು ಸಲ್ಲಿಸಿ, ರಾಜ್ಯದ ಆಡಳಿತ ನಿರ್ವಹಣೆಯ ವರದಿಯನ್ನು ಒಪ್ಪಿಸುವರು. ಈ ಪದ್ಧತಿಯ ತಲೆತಲಾಂತರದಿಂದ ನಡೆದುಕೊಂಡುಬಂದಿತ್ತು. ರಾಜರುಗಳೆಲ್ಲ ದೈವಭಕ್ತರು. ಅವರಲ್ಲಿ ಕೆಲವರು ಮಹಾನ್ ಸಂತರು ಕೂಡ

ಆಗಿಹೋದರು. ಅವರಲ್ಲಿ ವಿಶಿಷ್ಟನಾದವನೇ ಕುಲಶೇಖರ ಆಳ್ವಾರ್.

ಕುಲಶೇಖರ ಆಳ್ವಾರನ ತಂದೆಯ ಹೆಸರು ದೃಢವ್ರತ ಎಂದು. ಅವನಿಗೆ ಬಹುಕಾಲ ಮಕ್ಕಳಾಗಲಿಲ್ಲ. ಒಬ್ಬ ರಾಜನಿಗೆ ಮಕ್ಕಳು ಇಲ್ಲವೆಂದರೆ ಮಹಾಸಂಕಟ. ಸ್ವಂತವಾಗಿ ಮಕ್ಕಳಿಲ್ಲವಲ್ಲ ಎಂಬ ದುಃಖ. ರಾಜಸಂತತಿ ಮುಂದುವರೆದುಕೊಂಡು ಹೋಗ ಬೇಕು ಎನ್ನುವ ಕಳಕಳಿ. ಹೀಗಾಗಿ ರಾಜನು ಅನಂತಪದ್ಮನಾಭ ಸ್ವಾಮಿಯನ್ನು ಕುರಿತು ಉತ್ಕಟವಾಗಿ ಪ್ರಾರ್ಥಿಸಿದನು; ಪೂಜಿಸಿದನು. ಕೆಲವು ಕಾಲದ ನಂತರ ಪ್ರಭು ನಾರಾಯಣನು ಪ್ರತ್ಯಕ್ಷನಾದನು. 'ನಿನಗೆ ಸಂತನಾದ ಮಗನು ಹುಟ್ಟುತ್ತಾನೆ' ಎಂದು ಅವನು ಆಶ್ವಾಸನೆಯಿತ್ತನು. ಪ್ರಭವ ಸಂವತ್ಸರದ ಕುಂಭ ಮಾಸದ ಪುಣ್ಯದಿನದಿಂದು ಮಗನು ಹುಟ್ಟಿದನು. ಅವನು ಹುಟ್ಟಿದ್ದು ಕೇರಳದ ತಿರುವಂಜಿಕ್ಕಾಲಮ್ ಎಂಬ ಊರಿನಲ್ಲಿ. ಭಗವಾನ್ ವಿಷ್ಣುವಿನ ಕಂಠಾಭರಣವಾದ ಕೌಸ್ತುಭ ರತ್ನವೇ ಕುಲಶೇಖರನಾಗಿ ಹುಟ್ಟಿಬಂದಿದೆ ಎಂದು ಶ್ರದ್ಧಾಳುಗಳು ನಂಬುತ್ತಾರೆ.

ರಾಜಕುಮಾರ ಕುಲಶೇಖರನು ಯುದ್ಧವಿದ್ಯೆಯಲ್ಲಿ ಮತ್ತು ಸರ್ಕಾರಿ ಆಡಳಿತದಲ್ಲಿ ಬಹುಬೇಗನೇ ಪ್ರವೀಣನಾದನು. ಅಲ್ಲದೆ ಸಾಂಪ್ರದಾಯಿಕ ವಿದ್ಯೆಯಾದ ನಾಲ್ಕು ವೇದಗಳು, ಷಡಂಗಗಳನ್ನು ಕೂಡ ಬಹಳ ಸುಲಭವಾಗಿ ಕಲಿತುಕೊಂಡನು. ಹೀಗೆ ರಾಜನಾಗುವುದಕ್ಕೆ ಬೇಕಾದ ಎಲ್ಲ ಅರ್ಹತೆಗಳನ್ನೂ ಕೂಡ ಕುಲಶೇಖರನು ಸಂಪಾದಿಸಿಕೊಂಡನು. ಮಗನು ಪ್ರಾಪ್ತವಯಸ್ಕನಾದ ನಂತರ ಅವನ ತಂದೆಯು ಅವನನ್ನು ಅಧಿಪತಿಯನ್ನಾಗಿ ಪಟ್ಟಾಭಿಷೇಕವನ್ನು ಮಾಡಿದನು. ಕುಲಶೇಖರನು 'ಚೇರ ನಾಡು' (ಇಂದಿನ ಕೇರಳದ ಪ್ರಮುಖ ಭಾಗ) ಎಂಬ ಬಹುದೊಡ್ಡ ರಾಜ್ಯವನ್ನು ಆಳುತ್ತಿದ್ದನು. ಅದಲ್ಲದೆ ಪಕ್ಕದ ರಾಜ್ಯಗಳಾದ ಪಾಂಡ್ಯ ಮತ್ತು ಚೋಳನಾಡುಗಳನ್ನೂ ತನ್ನ ಆಡಳಿತಕ್ಕೆ ಒಳಪಡಿಸಿಕೊಂಡಿದ್ದನು. ಕುಲಶೇಖರನು ಬಹಳ ನ್ಯಾಯಯುತವಾಗಿ ರಾಜ್ಯಭಾರವನ್ನು ಮಾಡುತ್ತಿದ್ದನು. ಎಲ್ಲರನ್ನೂ ಪಕ್ಷಪಾತವಿಲ್ಲದೆ ನೋಡುತ್ತಿದ್ದನು. ಅವನು ಸದ್ಗುಣಿಯಾಗಿದ್ದನು; ನ್ಯಾಯ, ಶಾಂತಿ ಹಾಗೂ ಸಂತೋಷಗಳ ಮೂರ್ತರೂಪನೇ ಆಗಿದ್ದನು. ಅವನು ಆಡಳಿತವನ್ನು ಬಹಳ ಚಾಣಾಕ್ಷತನದಿಂದ ನಿರ್ವಹಿಸುತ್ತಿದ್ದನು. ಪ್ರಜೆಗಳನ್ನು ಮಕ್ಕಳಂತೆ ಕರುಣೆಯಿಂದ ನೋಡಿಕೊಳ್ಳುತ್ತಿದ್ದನು. ಎಲ್ಲರ ಮೇಲೆ ಅವ್ಯಾಜ ಪ್ರೇಮವನ್ನು ಹರಿಸುತ್ತಿದ್ದನು. ದಯೆಯ ಪ್ರತಿರೂಪವೇ ಆಗಿದ್ದನು.

ಇಷ್ಟಾಗಿದ್ದರೂ, ಆಧ್ಯಾತ್ಮಿಕತೆಯ ದೃಷ್ಟಿಯಲ್ಲಿ ಅವನು ಅಂಧನೇ ಆಗಿದ್ದನು. ತಾನೊಬ್ಬ ನಿರಂಕುಶ ರಾಜನೆಂಬ ಅಹಂಕಾರದಿಂದ ಮೆರೆಯುತ್ತಿದ್ದನು. ತನಗೆ ಒಡೆಯನಾಗಿ ಪರಮಾತ್ಮನಾದ ನಾರಾಯಣನು ಇರುವನೆಂಬ ಸತ್ಯವನ್ನು ಮರೆತೇಬಿಟ್ಟಿದ್ದನು. ಪ್ರಾಪಂಚಿಕ ವ್ಯಕ್ತಿಯಂತೆ ರಾಜನು ನಡೆದುಕೊಳ್ಳುತ್ತಿದ್ದನು. ತಾನು ಸ್ವತಂತ್ರ ಪ್ರಭುನೆಂಬ ಭ್ರಮೆಯಲ್ಲಿ ಇದ್ದನು.

ಭಗವಂತನು ಇದನ್ನೆಲ್ಲ ನೋಡುತ್ತಲೇ ಇದ್ದನು. ತನ್ನ ಪ್ರಿಯ ಭಕ್ತನ ಈ ಭ್ರಮೆಯನ್ನು ಕಳೆಯಲು ಒಂದು ಉಪಾಯವನ್ನು ಮಾಡಿದನು. ಅವನಲ್ಲಿ ಇದ್ದ ರಜಸ್ಸು ಮತ್ತು ತಮಸ್ಸುಗಳ ಸ್ವಭಾವವನ್ನು ಕಳೆದು, ಸಾತ್ವಿಕ ಗುಣವನ್ನು ಉಂಟುಮಾಡಿದನು. ಸತ್ವಪ್ರವೃತ್ತಿಯು ವೃದ್ಧಿಯಾಗುತ್ತಲೇ ಆಧ್ಯಾತ್ಮಿಕ ಪ್ರಜ್ಞೆಯು ಕುಲಶೇಖರನಲ್ಲಿ ನಿಧಾನವಾಗಿ ಅವತರಿಸಿತು. ಈ ಜಗತ್ತಿನ ನಶ್ವರತೆಯನ್ನು ಅವನು ಅರಿಯಲಾರಂಭಿಸಿದನು. ಇದರ ಸುಖದುಃಖಗಳ ಕ್ಷಣಿಕತೆಯನ್ನು ತಿಳಿದುಕೊಂಡನು. ಹಲವಾರು ರೀತಿಯ ಭಗವದ್ದರ್ಶನಗಳು ಅವನಿಗೆ ಉಂಟಾದವು. ಇದರಿಂದಾಗಿ ಅವನ ಮನಸ್ಸು –ಬುದ್ಧಿಗಳು ಭಗವತ್ಪ್ರೇಮದಿಂದ ತೊಯ್ದುಹೋದವು. ಕುಲಶೇಖರನು ಶ್ರೀಕೃಷ್ಣನ ಮಹಾನ್ ಭಕ್ತನಾಗಿ ಮಾರ್ಪಟ್ಟನು.

ಭಗವಾನ್ ವಿಷ್ಣುವು ತನ್ನ ಆಪ್ತಬಂಟನಾದ ವಿಶ್ವಕ್ಸೇನನನ್ನೇ ಕುಲಶೇಖರನ ಬಳಿಗೆ ಕಳುಹಿಸಿದನು ಎಂದು ಐತಿಹ್ಯ ಹೇಳುತ್ತದೆ. ವಿಶ್ವಕ್ಸೇನನು ಕುಲಶೇಖರನಿಗೆ ಮಂತ್ರದೀಕ್ಷೆಯನ್ನು ಕೊಟ್ಟನು. ವೈಷ್ಣವ ಸಂಪ್ರದಾಯದ ಪಂಚಸಂಸ್ಕಾರವನ್ನು ಮಾಡಿಸಿದನು. ಆ ಐದು ಸಂಸ್ಕಾರಗಳು ಹೀಗಿವೆ: ಊರ್ಧ್ವಪುಂಡ್ರಧಾರಣ, ದಾಸ್ಯನಾಮ, ಮುದ್ರಾಧಾರಣ, ಮಂತ್ರೋಪದೇಶ ಮತ್ತು ಯಾಗ. ಇದಲ್ಲದೆ ವೈಷ್ಣವ ಸಂಪ್ರದಾಯದ ದಿವ್ಯರಹಸ್ಯಗಳನ್ನು ಕೂಡ ವಿಶ್ವಕ್ಸೇನನು ಅವನಿಗೆ ಬೋಧಿಸಿದನು.

ಹೀಗೆ ಕುಲಶೇಖರನು ಪರಮಾತ್ಮನ ಅಪಾರ ಕರುಣೆಗೆ ಪಾತ್ರನಾದನು. ಮತ್ತೆ ಮತ್ತೆ ಅವನಿಗೆ ಭಗವದುನ್ಮಾದವಾಗುತ್ತಲಿತ್ತು. ಆಧ್ಯಾತ್ಮಿಕ ದರ್ಶನಗಳು ಆಗುತ್ತಿದ್ದವು. ತನ್ನ ಹೃದಯದಾಳದಲ್ಲಿ ಹೊಮ್ಮಿಬರುತ್ತಿದ್ದ ಭಕ್ತಿಭಾವವನ್ನು ಅವನು ತನ್ನ ಹಾಡುಗಳ ಮೂಲಕ ವ್ಯಕ್ತಗೊಳಿಸುತ್ತಿದ್ದನು. ಅವೆಲ್ಲವೂ ನಾಲಾಯಿರ ದಿವ್ಯ ಪ್ರಬಂಧದಲ್ಲಿ ಅಡಕವಾಗಿವೆ. ಅವನು ಎಲ್ಲವನ್ನೂ ಪರಿಶುದ್ಧ ಆಧ್ಯಾತ್ಮಿಕ ಭಾವದಿಂದ ನೋಡುತ್ತಿದ್ದನು. ಹಾಗೆಯೇ ಪ್ರಾಪಂಚಿಕ ವಿಚಾರಗಳಲ್ಲಿ ಪ್ರಬಲವಾದ ವೈರಾಗ್ಯ ಭಾವನೆಯನ್ನು ಬೆಳೆಸಿಕೊಂಡನು.

ಕುಲಶೇಖರನಿಗೆ ಶ್ರೀರಂಗಧಾಮವನ್ನು ದರ್ಶಿಸಬೇಕು ಎಂಬ ಪ್ರಬಲವಾದ ಇಚ್ಛೆಯಾಯಿತು. ಶೇಷಶಾಯಿಯಾದ ರಂಗನಾಥ ಸ್ವಾಮಿಯ ದರ್ಶನವನ್ನು ಪಡೆಯಬೇಕು ಎಂಬ ಕಾತರವುಂಟಾಯಿತು. ಆದರೆ ರಾಜ್ಯದ ಮಂತ್ರಿಗಳು ಮತ್ತು ಅಧಿಕಾರಿಗಳಿಗೆ ಭಯ. ತಮ್ಮ ರಾಜನು ಶ್ರೀರಂಗಕ್ಕೆ ಹೋದರೆ ಅಲ್ಲಿನ ದೇವರಲ್ಲಿ ಲೀನನಾಗಿ ಹೋಗಿಬಿಟ್ಟರೆ ಏನು ಗತಿ! ಅಥವಾ ಅಲ್ಲಿಯೇ ಶಾಶ್ವತವಾಗಿ ನೆಲೆಸಿಬಿಟ್ಟರೆ! ಹೀಗಾಗಿ ಅವರೆಲ್ಲ ಒಂದಲ್ಲ ಒಂದು ಕಾರಣವನ್ನು ಹೇಳುತ್ತ ಅವನ ಶ್ರೀರಂಗನಾಥನ ದರ್ಶನವನ್ನು ಮುಂದೂಡುತ್ತಲೇ ಇದ್ದರು. ಅಷ್ಟೇ ಅಲ್ಲದೆ, ಕೆಲವೊಮ್ಮೆ ಕುಲಶೇಖರನು ತಿರುಪತಿಯ ವೆಂಕಟೇಶ್ವರ ಸ್ವಾಮಿಯ ದರ್ಶನವನ್ನು ಪಡೆಯಲು ಕೂಡ ಹಾತೊರೆಯುತ್ತಿದ್ದನು. ದೇವರ ದಿವ್ಯ ಸಾನ್ನಿಧ್ಯದಿಂದ ತುಂಬಿ ತುಳುಕುವ ವಿವಿಧ ಪುಣ್ಯಕ್ಷೇತ್ರಗಳನ್ನು

ದರ್ಶಿಸಲು ಕೂಡ ಅವನು ತವಕಿಸುತ್ತಿದ್ದನು. ಹೀಗೆ ಕುಲಶೇಖರನು ದಿವ್ಯ ಉನ್ಮತ್ತತೆಯಲ್ಲಿ ಲೀನವಾಗಿದ್ದನು. ಅವನು ಭಗವದ್ವ್ಯಾಕುಲತೆಯಲ್ಲಿ ಮುಳುಗಿಹೋಗಿದ್ದನು.

ಇಂಥ ಮಾನಸಿಕ ಸ್ಥಿತಿಯಲ್ಲಿ ಇದ್ದ ಕುಲಶೇಖರನು ಬಹಳ ದುಃಖಪಡುತ್ತಿದ್ದನು. ತನ್ನ ಆಧ್ಯಾತ್ಮಿಕ ತೃಷೆಯನ್ನು ತಣಿಸಿಕೊಳ್ಳಲು ಅವನು ಅನೇಕ ಬ್ರಾಹ್ಮಣ ಪಂಡಿತರನ್ನು ಕರೆಸಿ, ಅವರ ಮಾರ್ಗದರ್ಶನದಲ್ಲಿ ವೇದಗಳು, ವೇದಾಂತ, ೧೮ ಪುರಾಣಗಳು, ೧೮ ಉಪಪುರಾಣಗಳು, ರಾಮಾಯಣ-ಮಹಾಭಾರತ ಮತ್ತು ಧರ್ಮಶಾಸ್ತ್ರಗಳನ್ನು ಅಧ್ಯಯನ ಮಾಡಿದನು. ಇದರಲ್ಲಿಯೇ ಅವನು ಸಂತೋಷವನ್ನು ಕಂಡುಕೊಂಡನು. ಈ ಆಧ್ಯಾತ್ಮಿಕ ವಾಙ್ಮಯದ ಅಮೂಲ್ಯ ರತ್ನಗಳನ್ನು ಆರಿಸಿಕೊಂಡು, ಅವುಗಳನ್ನು ಕಾವ್ಯಮಾಲೆಯ ರೂಪದಲ್ಲಿ ಪೋಣಿಸಿದನು. ಈ ಕಾವ್ಯಮಾಲೆಯು '**ಮುಕುಂದ ಮಾಲಾ**' ಎಂದು ಹೆಸರಾಗಿದೆ.

ಅದರಲ್ಲಿನ ಒಂದು ಪದ್ಯವು ಅತ್ಯಂತ ಪ್ರಸಿದ್ಧವಾಗಿದೆ:

**ಕೃಷ್ಣ ತ್ವದೀಯ ಪದ ಪಂಕಜ ಪಂಜರಾಂತಮ್**
**ಅದ್ಯೈವ ಮೇ ವಿಶತು ಮಾನಸರಾಜಹಂಸಃ ।**
**ಪ್ರಾಣಪ್ರಯಾಣಸಮಯೇ ಕಫವಾತಪಿತ್ತೈಃ**
**ಕಂಠಾವರೋಧನವಿಧೌ ಸ್ಮರಣಂ ಕುತಸ್ತೇ ॥**

'ಹೇ ಕೃಷ್ಣ, ನನ್ನ ಮನಸ್ಸೆಂಬ ರಾಜಹಂಸವು ನಿನ್ನ ಪಾದಕಮಲಗಳೆಂಬ ಪಂಜರದಲ್ಲಿ ಈಗಲೇ ಸೇರಿಕೊಳ್ಳಲಿ. ಏಕೆಂದರೆ, ಪ್ರಾಣೋತ್ಕ್ರಮಣ ಕಾಲದಲ್ಲಿ ಕಫ, ವಾತ, ಪಿತ್ತಗಳಿಂದ ಗಂಟಲು ಕಟ್ಟಿರುವಾಗ ನಿನ್ನ ಸ್ಮರಣೆಯು ಹೇಗೆ ಸಾಧ್ಯವಾದೀತು?'

ಶಾಸ್ತ್ರಗ್ರಂಥಗಳಲ್ಲೆಲ್ಲ ಕುಲಶೇಖರನು ಬಹಳ ಇಷ್ಟಪಡುತ್ತಿದ್ದುದು ವಾಲ್ಮೀಕಿ ರಾಮಾಯಣವನ್ನು. ದಿನನಿತ್ಯವೂ ಅದನ್ನು ಅವನು ಪಾರಾಯಣ ಮಾಡುತ್ತಿದ್ದನು. ಕುಲಶೇಖರನು ಅದರಲ್ಲಿ ಮಗ್ನನಾಗಿ ಹೋಗುತ್ತಿದ್ದನು. ಒಮ್ಮೆ ಯುದ್ಧದಲ್ಲಿ ಏಳುಸಾವಿರ ಯೋಧರನ್ನು ಶ್ರೀರಾಮನು ಏಕಾಂಗಿಯಾಗಿ ಎದುರಿಸುತ್ತಿದ್ದಾನೆ ಎಂಬ ಪ್ರಸಂಗವು ಬಂದಿತು. ಒಡನೆ ಕುಲಶೇಖರನು ಎದ್ದು ನಿಂತನು. ತಾನು ತನ್ನ ಸೈನ್ಯದೊಂದಿಗೆ ಹೋಗಿ, ಶ್ರೀರಾಮನಿಗೆ ಸಹಾಯ ಮಾಡುವೆನೆಂದು ಪ್ರತಿಜ್ಞೆ ಮಾಡಿದನು. ''ಸೈನಿಕರೇ, ಮುನ್ನುಗ್ಗಿ! ಶತ್ರುಗಳನ್ನು ಕೊಲ್ಲಿರಿ'' ಎಂದು ಕೂಗಿ ಹೇಳಿದನು.

ತಮ್ಮ ರಾಜನನ್ನು ಹೇಗೆ ಸಮಾಧಾನ ಪಡಿಸುವುದು? ಇದಕ್ಕಾಗಿ ಮಂತ್ರಿಗಳು ಒಂದು ಉಪಾಯವನ್ನು ಮಾಡಿದರು. ಮುಂಚೆಯೇ ಒಂದು ಸೇನಾಪಡೆಯನ್ನು ಕಳಿಸಿದರು. ರಾಜನು ಹೋಗುತ್ತಿದ್ದ ಮಾರ್ಗದಲ್ಲಿಯೇ ಅವರು ಹಿಂತಿರುಗಿ ಬಂದರು. ನಾವು ಈಗಾಗಲೇ ಶತ್ರುಗಳನ್ನು ಸೋಲಿಸಿದ್ದೇವೆ ಎಂದು ಅವನಿಗೆ ಸಾಂತ್ವನ ಹೇಳಿದರು. ಮುಗ್ಧ ಭಕ್ತನು ಅದನ್ನು ನಂಬಿದನು. ಸಮಾಧಾನಗೊಂಡು, ತನ್ನ ಅರಮನೆಗೆ ಹಿಂತಿರುಗಿದನು.

ಕುಲಶೇಖರನಿಗೆ 'ವಾಲ್ಮೀಕಿ ರಾಮಾಯಣ'ದ ಅಧ್ಯಯನವು ಅತ್ಯಂತ ಪ್ರಮುಖವಾದ ಆಧ್ಯಾತ್ಮಿಕ ಸಾಧನವಾಗಿತ್ತು. ಒಂದು ಮುಖ್ಯವಾದ ಕಥೆಯನ್ನು ಓದಿದ ಒಡನೆ, ರಾಜನು ಅದ್ದೂರಿಯಾಗಿ ಉತ್ಸವವನ್ನು ಆಚರಿಸುತ್ತಿದ್ದನು. ದೇವರ ಕೋಣೆಯಲ್ಲಿದ್ದ ರಾಮದೇವರ ಮೂರ್ತಿಯನ್ನು ಮೆರವಣಿಗೆಯಲ್ಲಿ ಕೊಂಡೊಯ್ದು ಅದ್ಭುತವಾದ ರೀತಿಯಲ್ಲಿ ಪೂಜಿಸುತ್ತಿದ್ದನು. ಬ್ರಾಹ್ಮಣರಿಗೆ ಸಂತರ್ಪಣೆಯನ್ನು ನಡೆಸುತ್ತಿದ್ದನು.

ರಾಮಾಯಣದ ಬಗ್ಗೆ ತಮ್ಮ ಪ್ರಭುವು ತೋರಿಸುತ್ತಿದ್ದ ಉತ್ಕಟ ಭಾವೋನ್ಮತ್ತತೆಯನ್ನು ಕಂಡು, ಪಾಠಕರು ಬಹಳ ಜಾಗರೂಕತೆಯಿಂದ ನಡೆದುಕೊಳ್ಳುತ್ತಿದ್ದರು. ರಾಜನಲ್ಲಿ ತೀವ್ರವಾದ ಸುಖ ಅಥವಾ ದುಃಖದ ಉದ್ವೇಗಗಳನ್ನು ಉಂಟುಮಾಡುವ ಪ್ರಸಂಗಗಳನ್ನು ಬಿಟ್ಟುಬಿಡುತ್ತಿದ್ದರು. ಏಕೆಂದರೆ, ಭಗವಂತನ ಮೇಲಿನ ಉತ್ಕಟ ಪ್ರೀತಿಯಿಂದ ರಾಜನು ಭಾವಾವಿಷ್ಟನಾಗಿ ಬಿಡುತ್ತಿದ್ದನು. ಭಗವಾನ್ ರಾಮನು ಸಂತೋಷಗೊಂಡಾಗ, ಕುಲಶೇಖರನೂ ಹರ್ಷಗೊಳ್ಳುವನು. ರಾಮನ ದುಃಖದ ಸಂದರ್ಭಗಳಲ್ಲಿ, ಕುಲಶೇಖರನೂ ಕಣ್ಣೀರುಗರೆಯುವನು. ಹೀಗೆ ರಾಮದೇವರ ವ್ಯಕ್ತಿತ್ವದಲ್ಲಿ ಕುಲಶೇಖರನು ಒಂದಾಗಿಬಿಟ್ಟಿದ್ದನು.

ಒಮ್ಮೆ ಪಾಠಕನು ಪಾರಾಯಣಕ್ಕೆ ಬರಲಾಗಲಿಲ್ಲ. ತನ್ನ ಮಗನನ್ನು ಕಳಿಸಿದನು. ಅವನಿಗೆ ರಾಜನ ಭಾವವು ತಿಳಿದಿರಲಿಲ್ಲ. ಹೀಗಾಗಿ ಗ್ರಂಥದ ಎಲ್ಲ ಶ್ಲೋಕಗಳನ್ನೂ ಓದಿಬಿಟ್ಟನು. ಅಂದು ಸೀತಾಪಹರಣದ ಕಥೆ ಬಂದಿತ್ತು. ಸೀತೆಯನ್ನು ರಾವಣನು ಕದ್ದುಕೊಂಡು ಹೋದನೆಂದು ಕೇಳಿದೊಡನೆಯೇ, ರಾಜನ ಕೋಪವು ನೆತ್ತಿಗೇರಿತು. ''ಒಡನೆ, ನಾನು ಸಮುದ್ರವನ್ನು ದಾಟಿ ಹೋಗುವೆನು. ಲಂಕೆಯನ್ನು ಸುಟ್ಟುಬಿಡುವೆನು. ರಾವಣನನ್ನು ನಿರ್ನಾಮ ಮಾಡುವೆನು. ರೋದಿಸುತ್ತಿರುವ ತಾಯಿ ಸೀತೆಯನ್ನು ಕಾಪಾಡುವೆನು. ನನ್ನ ತಂದೆಯಾದ ಶ್ರೀರಾಮನೊಡನೆ ಅವಳನ್ನು ಮತ್ತೆ ಸೇರಿಸುವೆನು'' ಎಂದು ಕೂಗಾಡಿದನು.

ಒಡನೆ ದೊಡ್ಡದಾದ ಸೈನ್ಯವನ್ನು ತೆಗೆದುಕೊಂಡು ಕುಲಶೇಖರನು ಸಮುದ್ರತೀರಕ್ಕೆ ಹೋದನು. ಲಂಕೆಯ ಕಡೆಗೆ ದೃಷ್ಟಿಸುತ್ತ, ಹಿಂದುಮುಂದೆ ನೋಡದೆ ನೀರಿನಲ್ಲಿ ಬಿದ್ದನು. ಮಂತ್ರಿಗಳು ದಿಗ್ಭ್ರಾಂತರಾದರು. ರಾಜನು ಕಂಠಪೂರ್ತಿ ಮುಳುಗಿಬಿಟ್ಟಿದ್ದನು. ಈಜುತ್ತ ಸಮುದ್ರವನ್ನು ದಾಟುವೆನೆಂದು ಸಂಕಲ್ಪಿಸಿದನು. ಲಂಕೆಯನ್ನು ಸೇರಿ ಸೀತೆಯನ್ನು ರಕ್ಷಿಸುವೆಂದು ಪಣತೊಟ್ಟನು.

ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಶ್ರೀರಾಮಚಂದ್ರನು ಸೀತಾಸಮೇತನಾಗಿ ಕುಲಶೇಖರನಿಗೆ ಕಾಣಿಸಿಕೊಂಡನು. ತನ್ನ ಭಕ್ತನಿಗೆ ಹೀಗೆ ಹೇಳಿದನು: ''ಓ ನನ್ನ ಭಕ್ತನೇ. ನಾವಿಬ್ಬರೂ ಇದೀಗ ತಾನೇ ಯುದ್ಧಭೂಮಿಯಿಂದ ಹಿಂದಿರುಗಿ ಬರುತ್ತಿದ್ದೇವೆ. ನಮ್ಮ ಶತ್ರುಗಳೆಲ್ಲ ನಾಶವಾಗಿದ್ದಾರೆ. ನಮ್ಮನ್ನು ರಕ್ಷಿಸುವುದಕ್ಕೆ ನೀನು ಕೈಗೊಂಡ ಕಾರ್ಯವು ಸಂಪನ್ನವಾಗಿದೆ. ನಿನ್ನ ಇಚ್ಛೆಯು ಪೂರ್ತಿ

ಯಾಯಿತು. ನಾವೆಲ್ಲ ಈಗ ರಾಜಧಾನಿಗೆ ಹಿಂತಿರುಗೋಣ. ನಾವು ಜೀವಿಗಳನ್ನು ಸಂಸಾರಸಾಗರದಿಂದ ಎತ್ತಿ ವೈಕುಂಠಕ್ಕೆ ಕೊಂಡೊಯ್ಯುವವರು. ಅದೇ ರೀತಿ ನಿನ್ನನ್ನೂ ಎತ್ತಿ ಸಾಗರದ ತೀರಕ್ಕೆ ಕೊಂಡೊಯ್ಯುತ್ತೇವೆ.'' ಹೀಗೆ ಹೇಳಿದ ರಾಮನು ತನ್ನ ಭಕ್ತಾಗ್ರೇಸರನನ್ನು ತೋಳುಗಳಿಂದ ಎತ್ತಿ ತೀರಕ್ಕೆ ಸಾಗಿಸಿದನು.

ಹೀಗೆ ಮತ್ತೆ ಮತ್ತೆ ದಿವ್ಯೋನ್ಮಾದದಲ್ಲಿ ಮುಳುಗಿಹೋಗುತ್ತಿದ್ದ ರಾಜನನ್ನು ರಾಜ್ಯಭಾರದತ್ತ ಮನಸ್ಸನ್ನು ಸೆಳೆಯಲು ಏನು ಮಾಡಬೇಕು ಎಂದು ಮಂತ್ರಿಗಳು ಬಹಳ ಯೋಚಿಸಿದರು. ಅವನ ಸುತ್ತ ಇರುವ ಭಕ್ತವೃಂದವೇ ಇದಕ್ಕೆ ಕಾರಣ ಎಂದು ಕಂಡುಕೊಂಡರು. ಅವರನ್ನೆಲ್ಲ ಯಾವುದಾದರೂ ನೆಪದಿಂದ ಕಳಿಸಿಬಿಡಬೇಕು ಎಂದು ಯೋಜನೆ ರೂಪಿಸಿದರು. ಆದರೆ ರಾಜನು ರಾಜ್ಯಾಡಳಿತದತ್ತ ಆಸಕ್ತಿಯನ್ನು ತೋರುವ ಬದಲಾಗಿ, ಶ್ರೀರಂಗಕ್ಷೇತ್ರವನ್ನು ದರ್ಶಿಸಬೇಕೆಂದು ಹಾತೊರೆಯಲು ಆರಂಭಿಸಿದನು. ಪ್ರಾಪಂಚಿಕ ರಾಜ್ಯವನ್ನು ತ್ಯಜಿಸಿ, ಭಗವಂತನ ದಿವ್ಯ ಸಾಮ್ರಾಜ್ಯವನ್ನು ಸೇರಿಕೊಳ್ಳುವ ತವಕ ಅವನಲ್ಲಿ ಮಿತಿಮೀರಿತು. ರಾಜ್ಯವನ್ನು ತ್ಯಜಿಸಿ ಶ್ರೀರಂಗ ಧಾಮಕ್ಕೆ ಹೋಗಿ ನೆಲೆಸಲು ಬೇಕಾದ ಎಲ್ಲ ಉಪಾಯಗಳನ್ನೂ ಮಾಡಿಕೊಳ್ಳುವಂತೆ ಅವನು ತನ್ನ ಅನುಚರರಿಗೆ ಆದೇಶವಿತ್ತನು.

ಇದನ್ನು ತಡೆಯಲು ಮಂತ್ರಿಗಳು ಮತ್ತೊಂದು ಉಪಾಯವನ್ನು ಹೂಡಬೇಕಾಯಿತು. ಎಂದೆಂದು ಇಂಥ ಉತ್ಕಟ ಇಚ್ಛೆ ರಾಜನಿಗೆ ಬರುತ್ತದೆಯೋ, ಆಗೆಲ್ಲ ಮಹಾಭಕ್ತರೊಬ್ಬರನ್ನು ಅರಮನೆಗೆ ಆಹ್ವಾನಿಸುತ್ತಿದ್ದರು. ಮಹಾತ್ಮರ ದರ್ಶನ ಎಂದರೆ ಕುಲಶೇಖರನಿಗೆ ಅತೀವ ಧನ್ಯತೆಯ ಅನುಭವವೇ ಆಗುತ್ತಿತ್ತು. ಅವರ ಸೇವೆಯಲ್ಲಿ ಅವನು ಕಾಲವನ್ನು ಕಳೆಯುತ್ತಿದ್ದನು. ಶ್ರೀರಂಗ ಧಾಮ ದರ್ಶನದ ತನ್ನ ಉತ್ಸುಕತೆಯನ್ನು ತಾತ್ಕಾಲಿಕವಾಗಿ ಮರೆತುಬಿಡುತ್ತಿದ್ದನು.

ನೂರಾರು ಭಕ್ತಜನರು ಅರಮನೆಯಲ್ಲಿ ನೆರೆಯುತ್ತಿದ್ದರು. ಇದನ್ನು ಕಂಡು ಮಂತ್ರಿಗಳ ಕಣ್ಣು ಕೆಂಪಾಯಿತು. ಇವರನ್ನೆಲ್ಲ ಓಡಿಸುವ ಬಗೆ ಹೇಗೆ ಎಂದು ಯೋಚಿಸಿದರು. ರಾಜನ ಬೆಲೆಬಾಳುವ ರತ್ನಹಾರವನ್ನು ತಾವೇ ಕಳವು ಮಾಡಿಸಿದರು. ಭಕ್ತರ ಮೇಲೆ ಆ ಕಳ್ಳತನದ ಆರೋಪವನ್ನು ಹೊರಿಸಿದರು. ಹೇಗಾದರೂ ರಾಜನು ಅವರನ್ನು ಶಿಕ್ಷಿಸಿ ಓಡಿಸಿಬಿಡುವನು ಎಂದು ಭಾವಿಸಿದರು. ಆದರೆ ಭಕ್ತ ಕುಲಶೇಖರ ಮಾಡಿದ್ದೇ ಬೇರೆ. ಅವನು ತನ್ನ ಮಂತ್ರಿಗಳಿಗೆ ಹೀಗೆ ಹೇಳಿದನು:

''ಮಂತ್ರಿಗಳೇ, ಭಗವದ್ಭಕ್ತರು ಮನಸ್ಸಿನಲ್ಲಿಯೂ ಕಳ್ಳತನದ ಆಲೋಚನೆಯನ್ನು ಮಾಡಲಾರರು. ಇಂಥ ಚಿಂತನೆಯು ಅವರ ಮನಸ್ಸಿನಲ್ಲಿ ಎಂದಿಗೂ ಉದಯವಾಗದು. ನಾನು ಈ ಬಗ್ಗೆ ಒಂದು ಪ್ರತಿಜ್ಞೆಯನ್ನು ಮಾಡುತ್ತೇನೆ. ಒಂದು ಬುಟ್ಟಿಯ ಒಳಗೆ ವಿಷಭರಿತವಾದ ಹಾವನ್ನು ಇಟ್ಟು ತರಲು ಹೇಳಿರಿ. ಅದರೊಳಗೆ ನನ್ನ ಕೈಯನ್ನು ಇಡುತ್ತೇನೆ. ಹಾವು ನನ್ನನ್ನು ಕಚ್ಚಿ, ನನಗೆ ವಿಷವೇರಿದರೆ ಮಾತ್ರವೇ, ಈ ವಿಷ್ಣುಭಕ್ತರು ಕಳ್ಳರೆಂದು ನಾನು ನಂಬುವೆ.''

ಇದನ್ನು ಕೇಳಿ ಮಂತ್ರಿಗಳು ಭಯಭೀತರಾದರು. ಇಂಥ ರಾಜನ ಹತ್ತಿರ ತಮ್ಮ ಆಟಗಳೇನೂ ನಡೆಯುವುದಿಲ್ಲ ಎಂದು ಮನಗಂಡರು. ಕಾಲಿಗೆ ಬಿದ್ದು ಕ್ಷಮಾಪಣೆ ಕೇಳಿದರು. ಕುಲಶೇಖರನು ಅವರನ್ನು ಕ್ಷಮಿಸಿದನು. ರಾಮನಂತೆಯೇ ಕರುಣಾಳುವಾದನು. ಸೀತೆಯ ಮೇಲೆ ಆಕ್ರಮಣ ಮಾಡಿದ ಕಾಕಾಸುರನನ್ನು ರಾಮನು ಅನುಕಂಪದಿಂದ ಕ್ಷಮಿಸಿಬಿಟ್ಟಿದ್ದನು. ಅದೇ ರೀತಿಯ ಸದ್ಗುಣವನ್ನು ರಾಜನಾದ ಕುಲಶೇಖರನೂ ತೋರಿಸಿದನು.

ಇಷ್ಟಾದರೂ ತನಗೇ ಮೋಸಮಾಡಲು ಹೊರಟ ತನ್ನ ಮಂತ್ರಿಗಳ ಮೇಲೆ ಕುಲಶೇಖರನಿಗೆ ಜುಗುಪ್ಸೆ ಮೂಡಿತು. ಆ ಮೂಲಕ ಇಡೀ ಜಗತ್ತಿನ ಮೇಲೆಯೇ ವೈರಾಗ್ಯ ಮೂಡಿತು. ಭಗವಂತನಿಂದ ವಿಮುಖರಾದ ಈ ಪ್ರಾಣಿಸಮಾನ ಮನುಷ್ಯರ ಜೊತೆಗೆ ಬದುಕುವುದಕ್ಕಿಂತ ಬೆಂಕಿಗೆ ಬಿದ್ದು ಸಾಯುವುದೇ ಲೇಸು ಎಂದು ಅವನು ಚಿಂತಿಸಿದನು. ಆ ಕ್ಷಣವೇ ಆ ಸಂತ ರಾಜನು ರಾಜ್ಯದ ಭಾರವನ್ನು ಕಿತ್ತೊಗೆಯಲು ನಿಶ್ಚಯಿಸಿದನು. ತನ್ನ ಮಗನಾದ ದೃಢವ್ರತನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದನು. (ತನ್ನ ತಂದೆಯ ಹೆಸರನ್ನೇ ತನ್ನ ಮಗನಿಗೂ ಇಟ್ಟಿದ್ದನು). ಭಕ್ತೆಯಾದ ತನ್ನ ಮಗಳನ್ನು ಕೂಡಿಕೊಂಡು, ಶ್ರೀರಂಗ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದನು. ಆ ಮೂಲಕ ತನ್ನ ಒಡಲಾಳದ ಬಯಕೆಯನ್ನು ತೀರಿಸಿಕೊಂಡನು. ಅಲ್ಲಿಗೆ ಹೋದಮೇಲೆ, ಪ್ರಭು ರಂಗನಾಥನೊಡನೆಯೇ ತನ್ನ ಮಗಳ ಮದುವೆಯನ್ನು ಮಾಡಿಬಿಟ್ಟನು! ಹೀಗೆ ತನ್ನ ಇಷ್ಟದೈವವನ್ನೇ ತನ್ನ ಅಳಿಯನನ್ನಾಗಿ ಮಾಡಿಕೊಂಡನು!

ಇದಾದ ನಂತರ ಬಹಳ ವರ್ಷಗಳ ಕಾಲ ಕುಲಶೇಖರನು ಭಗವಂತನ ಮತ್ತು ಭಗವದ್ಭಕ್ತರ ಸೇವೆಯಲ್ಲಿ ತನ್ನ ಕಾಲವನ್ನು ಸವೆಯಿಸಿದನು. ತಿರುಪತಿ, ಅಯೋಧ್ಯೆ, ಚಿತ್ರಕೂಟಗಳಂಥ ಪವಿತ್ರಕ್ಷೇತ್ರಗಳನ್ನು ಸಂದರ್ಶಿಸಿದನು.

ದಿವ್ಯಭಾವದಲ್ಲಿ ಅವನು ಹಾಡಿದ ತಮಿಳು ಭಕ್ತಿಗೀತೆಗಳು ದಿವ್ಯಪ್ರಬಂಧಗಳಲ್ಲಿ ಅಡಕವಾಗಿವೆ. ಈ ರಚನೆಯನ್ನು ಪೆರುಮಾಳ್ ತಿರುಮೊಳಿ ಎಂದೂ ಕರೆಯುತ್ತಾರೆ. ತನ್ನ ಇಹಲೋಕದ ಕಡೆಯ ದಿನಗಳಲ್ಲಿ ಕುಲಶೇಖರನು ತಿರುನಗರಿಯಲ್ಲಿರುವ (ಇಂದಿನ ತಿನೆವೆಲ್ಲಿ) ನಮ್ಮಾಳ್ವಾರ್‌ರ ದಿವ್ಯ ಸನ್ನಿಧಿಗೆ ಹೋದನು. ಅಲ್ಲಿಂದ ಬ್ರಹ್ಮದೇಶ ಮನ್ನಾರ್ ಕೋಯಿಲ್ ಎಂಬ ಪವಿತ್ರಕ್ಷೇತ್ರಕ್ಕೆ ಭೇಟಿಕೊಟ್ಟು, ಅಲ್ಲಿನ ಅಧಿದೈವತೆಯಾದ ರಾಜಗೋಪಾಲ ಸ್ವಾಮಿಯ ಸೇವೆಯನ್ನು ಬಹುಕಾಲ ಮಾಡಿದನು. ತನ್ನ ೬೭ನೇ ವಯಸ್ಸಿನಲ್ಲಿ, ಇಹಲೋಕವನ್ನು ತ್ಯಜಿಸಿ ವೈಕುಂಠ ಧಾಮವನ್ನು ಸೇರಿದನು.

ಧನ್ಯ ಕುಲಶೇಖರ! ಆತನಿಗೆ ಜನ್ಮಕೊಟ್ಟ ಈ ಧರಣಿಯೂ ಧನ್ಯ!



# ಸೋದರಿ ನಿವೇದಿತಾ ಭಾಗ ೮



ಕಥೆ: ದೇವಪ್ರಸಾದ ಭಟ್ಟಾಚಾರ್ಯ ಅನುವಾದ: ಉಷಾ ಎಸ್. ಮೂರ್ತಿ ಚಿತ್ರ: ಸುನಿತಾ ವಾಸು



















ತನ್ನ ಶಾಲೆಯ ಕೆಲಸಗಳ ಜೊತೆಗೆ ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲೂ ಪಾಲ್ಗೊಳ್ಳಲು ನಿಶ್ಚಯಿಸಿದಳು.


ಭಾರತೀಯ ಯುವಕರಲ್ಲಿ ರಾಷ್ಟ್ರ ಪ್ರೇಮ ಹಾಗೂ ತ್ಯಾಗ ಮನೋಭಾವನೆಯನ್ನು ಕೆರಳಿಸುವ ಭಾಷಣಗಳನ್ನು ಮಾಡಲು ಪ್ರಾರಂಭಿಸಿದಳು.


ಇಲ್ಲಿನ ಮಹಿಳೆಯರಲ್ಲಿ ಜಾಗೃತಿ ಮೂಡಿಸಿದಾಗ ಮಾತ್ರ ಭಾರತದ ಏಳ್ಗೆ ಸಾಧ್ಯವೆಂಬುದನ್ನು ಸ್ವಾಮೀಜಿಯಂತೆ ನಿವೇದಿತಾ ಕೂಡ ನಂಬಿದ್ದಳು.


ಈಗಿನ ಪರಿಸ್ಥಿತಿಯಿಂದ ಅವರನ್ನು ಮೇಲೆತ್ತಲು ಉತ್ತಮವಾದ ವಿದ್ಯಾಭ್ಯಾಸ ಬೇಕು. ಆದರೆ ಇಲ್ಲಿನ ಸ್ತ್ರೀಯರು ಭಾರತೀಯ ಆದರ್ಶ, ಸಂಸ್ಕೃತಿ ಮತ್ತು ಆಚರಣೆಗಳನ್ನು ಬಿಡಬಾರದು.


ಅವಳು ಭಾರತೀಯ ಮಹಿಳೆಯರ ಪಾವಿತ್ರ್ಯ, ಶ್ರದ್ಧೆ ಹಾಗೂ ತ್ಯಾಗ ಮನೋಭಾವನೆಯನ್ನು ಕೊಂಡಾಡುತ್ತಿದ್ದಳು.


ಅವಳು ಅವರ ಮುಂದೆ ಸೀತಾ, ಸಾವಿತ್ರಿ, ಉಮಾ, ಗಾಂಧಾರಿಯರ ಆದರ್ಶಗಳನ್ನು ಕುರಿತು ಹೇಳುತ್ತಿದ್ದಳು.


ದೇಶಕ್ಕಾಗಿ ಕೊನೆಯ ಉಸಿರಿರುವವರೆಗೂ ಹೋರಾಡಿದ ಧೀರ ಮಹಿಳೆಯರಾದ ಅಹಲ್ಯಾಬಾಯಿ, ಲಕ್ಷ್ಮೀಬಾಯಿಯವರ ಆದರ್ಶಗಳನ್ನು ಎತ್ತಿ ತೋರಿಸುತ್ತಿದ್ದಳು.


ತನ್ನ ಜೀವನದ ಕೊನೆಯ ಭಾಗವನ್ನು ಕಳೆಯಲು ನಿವೇದಿತಾ ದಾರ್ಜಿಲಿಂಗ್‌ಗೆ ಹೋದಳು.


1911ರ ಅಕ್ಟೋಬರ್ 13ರಂದು ಬೆಳಗ್ಗೆ 7 ಗಂಟೆಗೆ, ಹಿಮಾಲಯದ ಭವ್ಯ ಸೂರ್ಯೋದಯವನ್ನು ನೋಡುತ್ತಾ, ನಿವೇದಿತಾ ಕೊನೆಯುಸಿರೆಳೆದಳು.


ಅವಳ ದೇಹಕ್ಕೆ ಹಿಂದೂಪದ್ಧತಿಯಂತೆ ಅಗ್ನಿಸಂಸ್ಕಾರ ಮಾಡಲಾಯಿತು.


ಆ ಸ್ಥಳದಲ್ಲಿ ಒಂದು ಸ್ಮಾರಕವನ್ನು ನಿರ್ಮಿಸಲಾಗಿದೆ.


ಅಸಾಮಾನ್ಯಳಾಗಿ ತನ್ನೆಲ್ಲವನ್ನೂ ಭಾರತಕ್ಕೆ ಅರ್ಪಿಸಿ, ಚಿರಶಾಂತಿಯನ್ನು ಹೊಂದಿದ ದಿವ್ಯ ಚೇತನ ಸೋದರಿ ನಿವೇದಿತಾ.


ಅವಳದು ನಿರಾಡಂಬರ ತಪಸ್ವೀ ಜೀವನ.


ತನ್ನ ಸಂಪೂರ್ಣ ಜೀವನವನ್ನು ಭಗವಂತನ ಪಾದಪದ್ಮಗಳಲ್ಲಿ ಸಮರ್ಪಿಸಿದಳು.


ಅವಳ ಹೆಸರೇ ಎಷ್ಟು ಅರ್ಥಪೂರ್ಣವಾಗಿದೆ ! ನಿವೇದಿತಾ – 'ಸಮರ್ಪಿಸಿಕೊಂಡವಳು.'


ಅವಳ ಹೆಸರೇ ಅವಳ ಜೀವನವನ್ನು ಬಿಂಬಿಸುತ್ತದೆ.
ಮುಗಿಯಿತು.





# ರಿಂಸೆ (RIMSE) ಯಲ್ಲಿ ರಾಷ್ಟ್ರೀಯ ವಿಚಾರ ಸಂಕಿರಣ

ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಂಗಸಂಸ್ಥೆಯಾದ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ (ರಿಂಸೆ)ಯು ಮಾರ್ಚ್ ೧೦, ೧೧ ಹಾಗೂ ೧೮ – ಈ ದಿನಗಳಲ್ಲಿ ಮೂರು ರಾಷ್ಟ್ರೀಯ ವಿಚಾರ ಸಂಕಿರಣಗಳನ್ನು ನಡೆಸಿತು. **'ಸುಜ್ಞಾನ'**, **'ವಿವೇಕ'** ಮತ್ತು **'ಅನನ್ಯ'** ಎಂಬ ಈ ವಿಚಾರ ಸಂಕಿರಣಗಳಲ್ಲಿ ಹಲವು ಸಂಸ್ಥೆಗಳ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಪಾಲ್ಗೊಂಡಿದ್ದು, ರಾಮಕೃಷ್ಣ ಮಿಷನ್ನಿನ ಸಂನ್ಯಾಸಿಗಳು ಹಾಗೂ ಇತರ ವಿದ್ವಾಂಸರು ಪ್ರವಚನ ನೀಡಿದರು.

**ಮಾರ್ಚ್ ೧೦, 'ಸುಜ್ಞಾನ':** ಬಿ.ಇಡಿ. ಪ್ರಶಿಕ್ಷಣಾರ್ಥಿಗಳಿಗಾಗಿ ಹಮ್ಮಿಕೊಳ್ಳಲಾದ ಒಂದು ದಿನದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಕರ್ನಾಟಕದ ವಿವಿಧ ಜಿಲ್ಲೆಗಳಿಂದ ಹಾಗೂ ಇತರ ರಾಜ್ಯಗಳಿಂದ ಸುಮಾರು ೨೫೦ ಮಂದಿ ಪ್ರಶಿಕ್ಷಣಾರ್ಥಿಗಳು ಭಾಗವಹಿಸಿದ್ದರು. ಮೈಸೂರು ಶ್ರೀರಾಮಕೃಷ್ಣಾಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮಜ್ಞಾನಂದಜಿಯವರು ಜ್ಯೋತಿ ಬೆಳಗಿ ಉದ್ಘಾಟಿಸಿ, ಆಶೀರ್ವಚನ ನೀಡಿದರು. ರಿಂಸೆಯ ಸಂಚಾಲಕರಾದ ಸ್ವಾಮಿ ಮಹೇಶಾತ್ಮಾನಂದಜಿಯವರು ವೇದಿಕೆಯ ಮೇಲೆ ಉಪಸ್ಥಿತರಿದ್ದು ಪ್ರಸ್ತಾವಿಕ ನುಡಿಗಳನ್ನಾಡಿದರು. ಮುಖ್ಯ ಅತಿಥಿಗಳಾದ ಶ್ರೀಮತಿ ತೇಜಸ್ವಿನಿ ಬಿ.ಯಕ್ಕುಂಡಿಮಠ ಅವರು ಸಮಾಜ ನಿರ್ಮಾಣದಲ್ಲಿ ಶಿಕ್ಷಕ, ಶಿಕ್ಷಕಿಯರ ಪಾತ್ರ ಬಹು ಮುಖ್ಯವಾಗಿದ್ದು, ಅವರು ತಮ್ಮ ಜವಾಬ್ದಾರಿಯನ್ನು ಅರಿತು ನಡೆಯಬೇಕು ಎಂದು ತಿಳಿಸಿದರು. ಶ್ರೀ ರಘೋತ್ತಮ್ ರಾವ್ ಅವರು 'ಸೃಜನಶೀಲ ಶಿಕ್ಷಣಶಾಸ್ತ್ರ' ಎಂಬ ವಿಷಯವನ್ನು ಕುರಿತು ಸವಿಸ್ತಾರವಾದ ಮಾಹಿತಿಯನ್ನು ನೀಡಿದರು.

**ಮಾರ್ಚ್ ೧೧, 'ವಿವೇಕ':** ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ ನಡೆದ ಈ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಪದವಿ ಹಾಗೂ ಸ್ನಾತಕೋತ್ತರ ಅಧ್ಯಯನ ಸಂಸ್ಥೆಗಳಿಂದ ಬಂದ ಸುಮಾರು ೧೭೦ ಮಂದಿ ತರುಣ–ತರುಣಿಯರು ಭಾಗವಹಿಸಿದ್ದರು. ಸ್ವಾಮಿ ಆತ್ಮಜ್ಞಾನಂದಜಿಯವರು ಆಶೀರ್ವಚನ ನೀಡಿದರು; ಬಳಿಕ ಸ್ವಾಮಿ ಮಹೇಶಾತ್ಮಾನಂದಜಿಯವರು ಪ್ರಸ್ತಾವಿಕ ನುಡಿಗಳನ್ನಾಡಿದರು. ಹೈದರಾಬಾದ್ ರಾಮಕೃಷ್ಣ ಮಠದ ಸ್ವಾಮಿ ಬೋಧಮಯಾನಂದಜಿಯವರು 'Be and Make' ಎಂಬ ವಿಷಯವಾಗಿ ಮಾತನಾಡಿದರು. ಮೈಸೂರು ಜಿಲ್ಲೆಯ ಪೋಲೀಸ್ ಮಹಾನಿರೀಕ್ಷಕರದ ಶ್ರೀ ರವಿ ಡಿ. ಚನ್ನಣ್ಣನವರ್ ಅಧ್ಯಕ್ಷ ಭಾಷಣ ಮಾಡಿದರು. ಅನಂತರ ಶ್ರೀ ರಘೋತ್ತಮ ರಾವ್ ಅವರು 'ವೈಯಕ್ತಿಕ ಯಶಸ್ಸು' ಎಂಬ ವಿಚಾರವಾಗಿ ಮಾತನಾಡಿದರು. ವಿವೇಕಾನಂದ ಯೂತ್ ಮೂವ್‌ಮೆಂಟಿನ ಡಾ. ಆರ್. ಬಾಲಸುಬ್ರಹ್ಮಣ್ಯಮ್ ಅವರು 'Transformation Mindset – The Need of the Hour' ಎಂಬ ವಿಷಯದ ಬಗ್ಗೆ ಮಾತನಾಡಿದರು.

**ಮಾರ್ಚ್ ೧೮, 'ಅನನ್ಯ':** ಸೋದರಿ ನಿವೇದಿತಾ ಅವರ ೧೫೦ನೇಯ ಜನ್ಮದಿನೋತ್ಸವದ ಅಂಗವಾಗಿ ನಡೆದ 'ಮಹಿಳಾ ಸಬಲೀಕರಣದಿಂದ ದೇಶದ ಅಭಿವೃದ್ಧಿ' ಎಂಬ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ನಾಡಿನ ಪದವಿ, ಸ್ನಾತಕೋತ್ತರ ವಿದ್ಯಾರ್ಥಿನಿಯರು ಭಾಗವಹಿಸಿದ್ದರು. ವಿಶ್ವಸಂಸ್ಥೆಯ 'ಯುವಧ್ವನಿ' ಪ್ರಶಸ್ತಿ ಪುರಸ್ಕೃತರಾದ ಕು. ಅಶ್ವಿನಿ ಅಂಗಡಿಯವರು ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಸ್ವಾಮಿ ಆತ್ಮಜ್ಞಾನಂದಜಿ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದರು. ಸ್ವಾಮಿ ಮಹೇಶಾತ್ಮನಂದಜಿ ಪ್ರಾಸ್ತಾವಿಕ ನುಡಿಗಳನ್ನಾಡಿದರು. ವಿಚಾರ ಗೋಷ್ಠಿಯಲ್ಲಿ ಬೆಂಗಳೂರು ಭವತಾರಿಣಿ ಆಶ್ರಮದ ಅಧ್ಯಕ್ಷರಾದ ವಿವೇಕಮಯಿ ಮಾತಾಜಿ, ಕು. ಪೋಷಿಣಿ, ಶ್ರೀಮತಿ ಛಾಯಾ ನಂಜಪ್ಪ ಮೊದಲಾದವರು ಭಾಷಣ ಮಾಡಿದರು. ಈ ಎಲ್ಲ ಶಿಬಿರಗಳ ರೂವಾರಿ, ರಿಂಸೆಯ ಸ್ವಾಮಿ ಶಾಂತಿವ್ರತಾನಂದಜಿ ಉಪಸ್ಥಿತರಿದ್ದರು.





Managing Editor : Swami Atmajnanananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

